Photo by Harish M. Shah



ಬಹುಮಾನ ಪಡೆದ ಶೀರ್ಷಿಕೆ

**ಕಾಲಿಲ್ಲದಿದ್ದರೂ ಎದ್ದುನಿಂತು ಆಡಬಲ್ಲುವು!**

ಕಳಿಸಿದವರು: ಕೆ. ಟಿ. ಅನಂತರೆಡ್ಡಿ

# ಚಂದಮಾಮ

ಏಪ್ರಿಲ್ '58

## ಈ ಸಂಚಿಕೆಯಲ್ಲಿ



ಅಲ್ಲದೆ ಫೋಟೋ ಶೀರ್ಷಿಕೆಯ ಸ್ಪರ್ಧೆ ಎಲ್ಲಾ ಇವೆ.

---


**ಚಂದಮಾಮ** (ಹೊರಡುವ ಎಲ್ಲಾ ಭಾಷೆಗಳಲ್ಲಿಯೂ)

**ಬಿಡಿ ಪ್ರತಿ 50 ನಯೇ ಪೈಸೇ; ವಾರ್ಷಿಕ ಚಂದಾ ರೂ. 6-00**

TIC 53a



**1936** 20 ನೇ ವಯಸ್ಸಿನಲ್ಲಿ, ಗಂಗಾಧರನು ತನ್ನ ಪಟ್ಟಣದಲ್ಲೇ ಅತಿ ಆಢ್ಯನ್ನು—ಈತನು, ಹೆಂಡತಿ, ಉದ್ಯೋಗ ಮತ್ತು ಹರ್ಕ್ಯುಲಿಸ್ ಸೈಕಿಲ್ ಪಡೆದಿದ್ದಾನೆ. ತರುಣನು ಇದಕ್ಕಿಂತ ಹೆಚ್ಚಿನನು ಬೇಕು ?

**ಇಂದು** ಲೋಕ ಎಷ್ಟು ಬದಲಾಗಿದೆ! ಗಂಗಾಧರನನ್ನು ಆತನ ಕಚೇರಿಗೆ ಒಯ್ಯುತ್ತಿದ್ದ ಹಳೆಯ ವಿಶ್ವಾಸಾರ್ಹ ಹರ್ಕ್ಯುಲಿಸ್ ಈಗ ಆತನ 20 ವರ್ಷ ಪ್ರಾಯದ ಮಗನನ್ನು ಕಾಲೇಜಿಗೆ ಒಯ್ಯುತ್ತಿದೆ!

## ಹರ್ಕ್ಯುಲಿಸ್ ಸೈಕಿಲ್‌ಗಿಂತ ಹೆಚ್ಚಿನದು. ಅದು ಜೀವಮಾನದ ಸಂಗಾತಿ




**ಹರ್ಕ್ಯುಲಿಸ್** ಪಡೆದವನನ್ನು ಕೇಳಿರಿ. ಇದುಜೀವಮಾನದ ವರೆಗೆ ಬರುವುದೆನ್ನುತ್ತಾನೆ ಆತ. ಸುಮಾರು 50 ವರ್ಷಗಳಿಂದ ಶ್ರೇಷ್ಠ ಸೈಕಿಲ್‌ಗಳನ್ನು ತಯಾರಿಸಿರುವ ಜನರ ಅನುಭವದ ಬೆಂಬಲದಿಂದ, ಈಗ ಈ ಅಚ್ಚುಕಟ್ಟಾದ **ಹರ್ಕ್ಯುಲಿಸ್** ಸೈಕಿಲನ್ನು ಟಿ. ಐ. ಸೈಕಿಲ್ಸ್‌ನ ಅತ್ಯಾಧುನಿಕ ಕಾರ್ಖಾನೆಯಲ್ಲಿ ತಯಾರಿಸಲಾಗುತ್ತಿದೆ. ಇದರ ಉಜ್ವಲ ಸೌಂದರ್ಯವನ್ನು, ಇದರ ನಯವಾದ, ಸುಲಭವಾದ ಸವಾರಿಯನ್ನು, ನೀವು ಮೆಚ್ಚುವಿರಿ. **ಹರ್ಕ್ಯುಲಿಸ್** ನೀವು ಕೊಳ್ಳಬಲ್ಲ ಸೈಕಿಲ್‌ಗಳಲ್ಲಿ ಅತಿ ಶ್ರೇಷ್ಠ, ಆದರೂ ಇದರ ಬೆಲೆ ಮಿತವಾಗಿದೆ.

ನಿಮ್ಮ ಸೈಕಿಲ್‌ಬಂಡವಾಳದ ಒಂದು ಹೂಡಿಕೆ- **ಹರ್ಕ್ಯುಲಿಸ್** ನಿಮ್ಮ ಹಣಕ್ಕೆ ಅತ್ಯುತ್ತಮ ಪ್ರತಿಫಲ

ಭಾರತದಲ್ಲಿ ತಯಾರಿಸಿದುದು : **ಟಿ. ಐ. ಸೈಕಿಲ್ಸ್ ಆಫ್ ಇಂಡಿಯಾ ಲಿಮಿಟೆಡ್, ಮದ್ರಾಸು**


ವೀರ
ಕಿಟ್ಟು
ಮತ್ತು
ಬಾಯಿಬಡುಕ
ಪುಟ್ಟು


ಆಹಾ! ಆ ಮಾವಿನ ಹಣ್ಣುಗಳನ್ನು ನೋಡು! ಅವು ನಿನ್ನ ಬಾಯಲ್ಲಿ ನೀರೂರುವಂತೆ ಮಾಡುತ್ತವೆ!


ಪುಟ್ಟು, ಲೇ ಪುಟ್ಟು! ಸುಳ್ಳು ಹೇಳೋದರಲ್ಲಿ ನೀನು ನಿಸ್ಸೀಮ ಎಂಬುದು ನನಗೆ ಗೊತ್ತಿದೆ. ನೀನು ಕಳ್ಳನೂ ಆಗುವಿಯಾ!
ನೀನೊಬ್ಬ ಹೇಡಿ!


ಓಡು ಪುಟ್ಟು, ಓಡಿ ಹೋಗಿ ಜೀವ ಉಳಸಿಕೋ, ಇಲ್ಲವಾದ್ರೆ ಕಷ್ಟದಲ್ಲ ಸಿಕ್ಕಿ ಬೀಳ್ತ್ರ!

DL. 324A-50 KN


ನೀನು ಬೇಕಾದ್ರೆ ಓಡು! ನಾನು ಯಾರಿಗೂ ಹೆದರೋನಲ್ಲ!


ಅಯ್ಯೋ! ಈ ಕಷ್ಟದಿಂದ ತಪ್ಪಿಸಿ ಕೊಳ್ಳೋದು ಸಾಧ್ಯವಿಲ್ಲವಲ್ಲ!


ಓ ಮಾಲೀ! ನಾನು ಮಾವಿನ ಹಣ್ಣುಗಳನ್ನು ಎಣಿಸುತ್ತಿದ್ದೆನಷ್ಟೆ, ಕೀಳುತ್ತಿರಲಿಲ್ಲ!


ಇನ್ನೆಂದಿಗೂ ನಿನ್ನ ಮಾವಿನ ಹಣ್ಣುಗಳನ್ನು ಮುಟ್ಟೋದಿಲ್ಲಾಂತ ಆಣೆ ಹಾಕ್ತೇನೆ!


ಅಬ್ಬಾ, ಓಡ್ದೋದಿ ಉಸಿರೇ ನಿಂತ ಹಾಗೆ ಆಗಿದೆಯಲ್ಲ ನನಗೆ!
ಸಂದೇಹವಿಲ್ಲ! ನೀನು ಎಂತಹ ನಿತ್ರಾಣಿ! ನನ್ನನ್ನು ನೋಡು. ನಾನು ದಿನಾಲೂ ಹಾಲು ಕುಡಿಯುತ್ತೇನೆ ಮತ್ತು 'ಡಾಲ್ಡ'ದಿಂದ ತಯಾರಿಸಿದ ಆಹಾರ ತೆಗೆದು ಕೊಳ್ಳುತ್ತೇನೆ. ಆದುದರಿಂದಲೇ ನಾನು ನಿನಗಿಂತ ಹೆಚ್ಚು ಬಲಿಷ್ಠನಾಗಿದ್ದೇನೆ


'ಡಾಲ್ಡ'ದಿಂದ ತಯಾರಿಸಿದ ಆಹಾರ ನಿಮಗೆ ಶಕ್ತಿಯನ್ನೂ ಸ್ಫೂರ್ತಿಯನ್ನೂ ಕೊಡುತ್ತದೆ, ಮತ್ತು ಅದು ಬಹಳ ಸುಲಭವಾಗಿ ಜೀರ್ಣವಾಗುತ್ತದೆ! ನಿಮ್ಮನ್ನು ಆರೋಗ್ಯದಲ್ಲಿಡುವುದಕ್ಕೆ ಅವಶ್ಯವಾಗಿರುವ ವಿಟಮಿನ್ 'ಎ' ಮತ್ತು 'ಡಿ' 'ಡಾಲ್ಡ'ಕ್ಕೆ ಸೇರಿಸಲ್ಪಡುತ್ತವೆ.



ಶೀಘ್ರದಲ್ಲಿಯೇ ಬರುತ್ತದೆ



ವಿಠಲ್ ರವರ..

# ಮನೆ ತುಂಬಿದ ಹೆಣ್ಣು (ಕನ್ನಡ)

ಸಂಭಾಷಣೆ · ಇಂದಿರಾತನಯ
ಗೀತೆಗಳು · ಸಾರೋಟ್ ಅಶ್ವಥ್
ಸಂಗೀತ · ರಾಜನ್·ನಾಗೇಂದ್ರ

ಸ್ಟೂಡಿಯೋ
ವಿಜಯ-ವಾಹಿನಿ

ನಿರ್ಮಾಪಕ · ನಿರ್ದೇಶಕ · ಬಿ. ವಿಠಲ ಆಚಾರ್ಯ

: ನೆಗೇಟಿವ್ ರೈಟ್ಸ್ ಕಂಟ್ರೋಲ್ :

**ವಿಜಯಾ ಪಿಕ್ಚರ್ಸ್ ಸರ್ಕ್ಯೂಟ್, ಮದರಾಸು - 26**

ಮೈಸೂರು, ಕೊಡಗು ಮತ್ತು ದಕ್ಷಿಣ ಕನ್ನಡಗಳಿಗೆ ಹಂಚಿಕೆಗಾರರು :

**ವಿಜಯಾ ಟಾಕೀ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು - 9**

ಬೊಂಬಾಯಿ ಪ್ರಾಂತಕ್ಕೆ: **ಶ್ರೀನಿವಾಸ ಪಿಕ್ಚರ್ಸ್, ಗದಗ.**

ಹೈದರಾಬಾದಿಗೆ: **ಜಗತ್ ಪಿಕ್ಚರ್ಸ್, ಸಿಕಂದರಾಬಾದು.**

# ಇದನ್ನು ಓದಿ ನೀವು ಆಶ್ಚರ್ಯಪಡುವಿರಿ...



ಗ್ರೀಸ್ ದೇಶದ ಸಮೀಪದಲ್ಲಿರುವ ಈಜಿಯನ್ ಸಮುದ್ರದಲ್ಲಿ ಅರ್ಜೆಂಟೀರಿಯಾ ಎಂಬ ಹೆಸರಿನ ಒಂದು ಚಿಕ್ಕ ದ್ವೀಪವಿದೆ. ಅಲ್ಲಿಯ ಮಣ್ಣಿಗೆ ಸಾಬೂನಿನ ಗುಣವಿದೆ. ಅದರಮೇಲೆ ಸ್ವಲ್ಪ ನೀರನ್ನು ಸುರಿದರೆ ನೊರೆಯುಂಟಾಗುತ್ತದೆ. ವಿಶೇಷವಾಗಿ, ಮಳೆ ಬರುವಾಗ ಎಲ್ಲೆಲ್ಲಿಯೂ ಮೊಣಕಾಲಷ್ಟು ಎತ್ತರ ನೊರೆಯಿರುತ್ತದೆ. ಬಟ್ಟೆಗಳನ್ನು ಒಗೆಯುವುದಕ್ಕೆ ಮತ್ತು ಸ್ನಾನಕ್ಕೆ ಕೂಡ ಈ ದ್ವೀಪದ ಜನರು ಆ ನೊರೆಯನ್ನೇ ಯಾವಾಗಲೂ ಉಪಯೋಗಿಸುತ್ತಿದ್ದಾರೆ.

ಶರೀರವನ್ನು ನಿರ್ಮಲಗೊಳಿಸಲೂ ಸಾಬೂನಿನಂತಹ ಒಂದು ವಸ್ತುವನ್ನು ಉಪಯೋಗಿಸುವುದರಲ್ಲಿ ಹೊಸತೇನೂ ಇಲ್ಲ. ಕಳೆದ **2500** ವರ್ಷಗಳಿಂದ ಇಂತಹ ವಸ್ತುಗಳು ಉಪಯೋಗಿಸಲ್ಪಡುತ್ತಿವೆ ಎಂದು ಇತಿಹಾಸದಿಂದ ನಮಗೆ ಗೊತ್ತಾಗುತ್ತದೆ.





ಶಾಸ್ತ್ರೀಯ ಕ್ರಮದಲ್ಲಿ ಮೊದಲು ಸಾಬೂನನ್ನು ತಯಾರಿಸಿದ ಕೀರ್ತಿ ಫ್ರಾನ್ಸಿನ 'ಶಿವ್ರಾಲ್' ಎಂಬ ಹೆಸರಿನ ಮನುಷ್ಯನಿಗೆ ಸಲ್ಲುತ್ತದೆ. ಅವನು **1813** ರಲ್ಲಿ ಎಲ್ಲಕ್ಕಿಂತ ಮೊದಲಿನ ಸಾಬೂನನ್ನು ತಯಾರಿಸಿದನು. ಲೈಫ್‌ಬಾಯ್ ಸೋಪಿನ ಜನ್ಮವಾದದ್ದು **1894** ರಲ್ಲಿ. ಈಗ ಅದು ಜಗತ್ತಿನಲ್ಲಿ ಎಲ್ಲಾ ಕಡೆಗಳಲ್ಲಿಯೂ ಆರೋಗ್ಯ ಮತ್ತು ನಿರ್ಮಲತೆಗಳ ಪ್ರತಿನಿಧಿಯಾಗಿದೆ.

ನಾವು ಯಾವ ಕೆಲಸ ಮಾಡುವುದಾದರೂ – ಅದು ಆಟವೇ ಇರಲಿ, ಅಥವಾ ಪಾಠವೇ ಇರಲಿ – ನಮ್ಮ ಮೈಕೈಗಳಲ್ಲಿ ಯಾವಾಗಲೂ ಕೊಳೆಯಾಗುತ್ತದೆ. ಈ ಕೊಳೆಯಲ್ಲಿ ರೋಗದ ಕ್ರಿಮಿಗಳಿವೆ. ಅವುಗಳು ಸೂಕ್ಷ್ಮದರ್ಶಕ ಯಂತ್ರದಿಂದ ನೋಡುವಾಗ ಮಾತ್ರ ಕಾಣಿಸುತ್ತವೆ. ಲೈಫ್‌ಬಾಯ್ ಸೋಪು ಈ ಕ್ರಿಮಿಗಳನ್ನು ತೊಳೆದು ತೆಗೆದು ನಿಮ್ಮ ಆರೋಗ್ಯವನ್ನು ರಕ್ಷಿಸುತ್ತದೆ. ಇದು ಅದರ ಮುಖ್ಯ ಗುಣ. ನೀವು ಕೂಡ ಲೈಫ್‌ಬಾಯ್ ಸೋಪಿನಿಂದ ಸ್ನಾನಮಾಡುವ ಅಭ್ಯಾಸವನ್ನಿಟ್ಟುಕೊಳ್ಳಬೇಕು. ಮತ್ತು ಆ ಮೂಲಕ ನಿಮ್ಮ ಆರೋಗ್ಯವನ್ನು ರಕ್ಷಿಸಿಕೊಳ್ಳಬೇಕು.




L. 276-50 KN

ಹಿಂದುಸ್ತಾನ್ ಲೀವರ್ ಲಿಮಿಟೆಡ್, ಅವರಿಂದ ತಯಾರಿಸಲ್ಪಟ್ಟದ್ದು.






ITL




SNOW



# "ಅರಣ್ಯದಲ್ಲಿಯ ಒಂದು ಗ್ರಾಮ"

ವಿಶಾಲವಾಗಿರುವ ಈ ನಮ್ಮ ಪ್ರಪಂಚದಲ್ಲಿ ವಿವಿಧ ಜನರು ವಾಸಿಸುತ್ತಾರೆ. ಉದಾಹರಣೆಗೆ, ಆಫ್ರಿಕದ ದಟ್ಟವಾದ ಅರಣ್ಯಗಳಲ್ಲಿ ಪಿಗ್ಮಿಗಳು ವಾಸಿಸುತ್ತಾರೆ. ಇವರು ಬಹಳ ಕುಳ್ಳರಾಗಿದ್ದು ವಾಸಿಸಲು ನಿಶ್ಚಿತ ಮನೆಗಳಿಲ್ಲದವರಾಗಿದ್ದಾರೆ. ಕಾಡು ಮೃಗಗಳನ್ನು ಬೇಟೆಯಾಡಿ, ಅರಣ್ಯದ ಹಣ್ಣು ಹಂಪಲುಗಳನ್ನು ತಿಂದು ತಿರುಗಾಡುತ್ತಿರುವುದೇ ಇವರ ಕಸಬು.

ಭಾರತದಲ್ಲೂ ನಿಬಿಡವಾದ ಕಾಡುಗಳಿವೆ. ಆದರೂ ಇಲ್ಲಿ ವಾಸಿಸುವ ಜನರು ಮಾತ್ರ ಪಿಗ್ಮಿಗಳ ಹಾಗಿಲ್ಲ. ಉದಾಹರಣೆಗೆ, ಮಧ್ಯ ಪ್ರದೇಶದ ಕಾಡುಜನರು ಚಿಕ್ಕ ಹಳ್ಳಿಗಳಲ್ಲಿ ಸಣ್ಣ ಪುಟ್ಟ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಿಸುತ್ತಾರೆ. ಮರ ಕಡಿಯುವುದು, ಕೃಷಿ ಮಾಡುವುದು, ದನಕರು ಮತ್ತು ಮೇಕೆಗಳನ್ನು ಕಾಯುವುದು ಮತ್ತು ಕೋಳಿಗಳನ್ನು ಸಾಕುವುದು ಇವೇ ಇವರ ವೃತ್ತಿ. ಇವರು ಕಷ್ಟಸಹಿಷ್ಣುಗಳು. ಆದರೆ ಸಂತೋಷಚಿತ್ತರೂ, ಚಿಂತಾರಹಿತರೂ ಆಗಿರುತ್ತಾರೆ.

ಈ ಸರಳ ಜೀವಿಗಳು ಸಾಮಾನ್ಯ ವಿನೋದಗಳನ್ನೂ ವಿಶ್ರಾಂತಿಯನ್ನೂ ಅಪೇಕ್ಷಿಸುತ್ತಾರೆ. ಮನಸ್ಸನ್ನು ಉಲ್ಲಾಸಪಡಿಸಲು ಇವರು ಗಾಯನ, ನೃತ್ಯ, ಹರಟೆ ಮತ್ತು ವಿನೋದಕರ ಆಟಗಳನ್ನು ಆಡುತ್ತಾರೆ. ಇವರ ಸುಖಸಾಧನೆಗಳಲ್ಲಿ ಚಹವೂ ಒಂದಾಗಿದೆ. ಕೆಲಸದ ಮೊದಲು ಮತ್ತು ನಂತರವೂ ಉತ್ತೇಜನ ಕೊಡುವ ಮತ್ತು ಉಲ್ಲಾಸವನ್ನುಂಟುಮಾಡುವ ಚಹವನ್ನು ಕಂಡರೆ ಇವರಿಗೆ ಬಹಳ ಇಷ್ಟ. ಅದರಲ್ಲೂ ಬ್ರೂಕ್ ಬಾಂಡ್ ಚಹ ಕಂಡರೆ ಬಹು ಪ್ರೀತಿ.

ಬ್ರೂಕ್ ಬಾಂಡ್ ಸೇಲ್ಸ್‌ಮನ್ನನು ಈ ಕಾಡಿನ ಸರಹದ್ದಿನಲ್ಲಿರುವ ಡಿಪೋವಿನಿಂದ ತಾಜಾ ಬ್ರೂಕ್ ಬಾಂಡ್ ಚಹ ತೆಗೆದುಕೊಂಡು, ಈ ಕಾಡಿನಲ್ಲಿರುವ ಹಳ್ಳಿಗಳಿಗೆ ಹೋಗುತ್ತಾನೆ. ಇಂತಹ ಹಳ್ಳಿಗಳಿಗೆ ಈ ಸೇಲ್ಸ್‌ಮನ್ನನು ಬಂದಾಗಲೆಲ್ಲಾ, ಈ ಸರಳ ಜೀವಿಗಳು ಬಹಳ ಕೃತಜ್ಞರಾಗಿರುತ್ತಾರೆ. ಏಕೆಂದರೆ, ಆತನು ತರುವ ತಾಜಾ ಬ್ರೂಕ್ ಬಾಂಡ್ ಚಹವು ಅವರಿಗೆ ಆಹ್ಲಾದವನ್ನುಂಟುಮಾಡುತ್ತದೆ.

**ಬ್ರೂಕ್ ಬಾಂಡ್ ಇಂಡಿಯಾ ಪ್ರ್ಯಾವೇಟ್ ಲಿಮಿಟೆಡ್**

BB 230

# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

ಸಾಕ್ಷಾತ್ ದೇವರಹತ್ತಿರವಿದ್ದ ಜಯ ವಿಜಯರುಕೂಡಾ ಋಷಿಗಳನ್ನು ಅಲಕ್ಷ್ಯ ಮಾಡಿದುದರಿಂದ, ಕಠಿನಶಾಪಕ್ಕೆ ಗುರಿಯಾಗಬೇಕಾಯಿತು. ದೊಡ್ಡವರ ಪ್ರೀತಿಗೆ ಪಾತ್ರರಾಗಿದ್ದರೂ ಅವರ ಪರಿವಾರವನ್ನು ಸಹಾ ಪ್ರೀತಿಸುತ್ತಲೂ ಯಥೋಚಿತವಾಗಿ ಗೌರವಿಸುತ್ತಲೂ ಇರುವುದೇ ವಿವೇಕಿಗಳ ಲಕ್ಷಣ. ದೊಡ್ಡವರ ಮೆಚ್ಚುಗೆ ತನ್ನಮೇಲಿದೆ ಎಂಬ ಅಹಂಕಾರವಿದ್ದರೆ, ಈ ಸಂಚಿಕೆಯಲ್ಲಿ ಪ್ರಕಟವಾದ ಕಥೆಯ 'ಭೈರವಶಾಸ್ತ್ರಿ'ಯ ಹಾಗೆ ಆಗುವುದೇನೂ ಆಶ್ಚರ್ಯವಲ್ಲ. ಓದಿನೋಡಿ!

ಸಂಪುಟ ೨೦] ಮೇ ೧೯೬೮ [ಸಂಚಿಕೆ ೫



# ಮುಖಚಿತ್ರ

ಉತ್ತರಕುಮಾರನು ವಿಜಯೋತ್ಸಾಹದಿಂದ ಹಿಂದಿರುಗಿಬಂದು ತಂದೆಗೂ ಧರ್ಮರಾಯನಿಗೂ ನಮಸ್ಕಾರ ಮಾಡಿದನು. ವಿರಾಟನು ಮಗನನ್ನು ಕುರಿತು, "ಕಂದಾ, ಚಿಕ್ಕವನಾದ ನೀನು ಆ ಮಹಾಯೋಧರನ್ನು ಹೇಗೆ ಜಯಿಸಿದಿ?" ಎಂದು ಕೇಳಿದನು.

"ತಂದೆಯೇ, ಅವರನ್ನು ಜಯಿಸಿದವನು ನಾನಲ್ಲ; ನಾನು ಯುದ್ಧರಂಗಕ್ಕೆ ಹೋಗುತಿರುವಾಗ ಒಬ್ಬ ದೇವಪುರುಷನು ಬಂದು ರಥವನ್ನೇರಿ ನನ್ನನ್ನು ಸಾರಥಿಯಾಗಿಟ್ಟುಕೊಂಡು ಕೌರವಯೋಧರೊಂದಿಗೆ ಹೋರಾಡಿ ಎಲ್ಲರನ್ನೂ ಓಡಿಸಿಬಿಟ್ಟನು! ಇನ್ನೆರಡು ಮೂರು ದಿನಗಳಲ್ಲಿ ಅವನು ನಮಗೆ ದರ್ಶನವೀಯುತ್ತಾನೆ" ಎಂದು ಉತ್ತರನು ಪ್ರತ್ಯುತ್ತರವಿತ್ತನು.

ತದನಂತರ ಮೂರನೇದಿನ ಪಂಚಪಾಂಡವರು ಸ್ನಾನಮಾಡಿ ಒಳ್ಳೆಯ ಬಟ್ಟೆಗಳನ್ನು ಧರಿಸಿಕೊಂಡು, ತಮ್ಮ ಆಭರಣಗಳನ್ನಿಟ್ಟುಕೊಂಡು, ವಿರಾಟನ ಸಭಾಸ್ಥಾನಕ್ಕೆ ಹೋಗಿ, ಅಲ್ಲಿರುವ ರಾಜಕುಟುಂಬದ ಆಸನಗಳಲ್ಲಿ ಕುಳಿತುಕೊಂಡರು. ಸ್ವಲ್ಪ ಹೊತ್ತಿಗೆ ವಿರಾಟರಾಜನು ಬಂದು ಅವರನ್ನು ಕಂಡು ಆಶ್ಚರ್ಯಪಟ್ಟನು. ನಂತರ ಕೋಪದಿಂದ ಧರ್ಮರಾಯನನ್ನು ಕುರಿತು, "ಎಲೋ ಕಂಕಭಟ್ಟ! ನನ್ನೊಂದಿಗೆ ಜೂಜಾಡುವ ಜೀತಗಾರನಾದ ನೀನು ನಮ್ಮ ಆಸನಗಳಲ್ಲಿ ಕುಳಿತಿರುವೆ ಏನಿದು?" ಎಂದು ಕೇಳಿದ. ಒಡನೇ ಅರ್ಜುನನು, "ಓ ರಾಜಾ, ಈತ ಪಾಂಡವಾಗ್ರಜನಾದ ಧರ್ಮರಾಯ, ಇವನಿಗೆ ನಿನ್ನ ಸಿಂಹಾಸನವೂ ಸಾಲದು!" ಎಂದ.

ವಿರಾಟರಾಜನು ಬೆರಗಾಗಿ, "ಹಾಗಾದರೆ ಉಳಿದ ಪಾಂಡವರೆಲ್ಲಿ?" ಎಂದು ಕೇಳಿದ. "ಇಗೋ ನಿನ್ನ ಅಡಿಗೆಗಾರ ಭೀಮನೇ ಈತ. ಇವನೇ ಕೀಚಕನನ್ನು ಕೊಂದನು. ನಿನ್ನ ಅಶ್ವಪಾಲಕನು ನಕುಲ; ಗೋಪಾಲಕನು ಸಹದೇವ. ಸೈರಂಧ್ರಿಯೇ ದ್ರೌಪದಿ!" ಎಂದು ಅರ್ಜುನನು ಬಿಡಿಸಿ ಹೇಳಿದ. ಉತ್ತರಕುಮಾರನು ಅರ್ಜುನನನ್ನು ತಂದೆಗೆ ಪರಿಚಯಮಾಡಿಸಿದನು. ವಿರಾಟರಾಜನಿಗೆ ಬಹಳ ಪಶ್ಚಾತ್ತಾಪವಾಯಿತು. ತಾನು ಪಂಚಪಾಂಡವರಿಂದ ಸೇವೆಮಾಡಿಸಿಕೊಂಡುದೂ, ಯುದ್ಧದಲ್ಲಿ ಅವರ ಸಹಾಯ ಪಡೆದುದೂ ಎಂದೂ ಮರೆಯಲಾಗದ ವಿಷಯುಗಳು. ಅದಕ್ಕೆ ಗುರುತಾಗಿ ಅವನು ತನ್ನ ಕುಮಾರಿ ಉತ್ತರೆಯನ್ನು ಅರ್ಜುನನ ಕುಮಾರನಾದ ಅಭಿಮನ್ಯುವಿಗಿತ್ತು ವಿವಾಹಮಾಡಲು ನಿಶ್ಚಯಮಾಡಿದನು.

ದ್ವಾರಕೆಯಿಂದ ಅಭಿನ್ಯು, ಕೃಷ್ಣ, ಬಲರಾಮ, ಸಾತ್ಯಕಿ ಮೊದಲಾದವರು ಬಂದರು. ಉತ್ತರಾಭಿಮನ್ಯುಗಳ ವಿವಾಹವು ವೈಭವದಿಂದ ಜರುಗಿತು.




ಸೋಮಿಲಕನಲ್ಲಿ
ತುಂಬಾ ಕಾಲದುಡಿದು,
ಬಲುಬನ್ನದಿಂ ನೂರು
ವರಹಗಳ ಪಡೆದು,
ಅದನು ಮೂಟೆಯ ಕಟ್ಟಿ
ತನ್ನೂರ ಕಡೆಗೆ
ಮುದದಿ ಹೊರಟನು, ತೋರಿ
ಸಲಿಕೆ ಹೆಂಡತಿಗೆ.
ಕಾನನದ ಬಳಿತಲುಪಿ
ದನು ಸಂಜೆಯಲ್ಲಿ.
ಮುಂದೆ ಇರುಳಲಿ ನಡೆಯ
ಲಾಗದೆಂದಲ್ಲಿ
ಒಂದು ಮರವೇರಿ ಟೊಂ
ಗೆಗೆ ಮೂಟೆ ಸಿಗಿಸಿ,
ಮೈ ಬಿಗಿದು ಮಲಗಿದನು
ಮೂಟೆ ಕೈಗಿಳಿಸಿ.

ಆಗ ಕೇಳಿಸಿತವಗೆ,
ಕರ್ತ - ಕರ್ಮಗಳು
ತಮ್ಮೊಳಗೆ ಆಡುತಿಹ
ಸಂಭಾಷಣೆಗಳು ;
"ಓ ಕರ್ತ! ಧನಿಕನಾ
ದೀಜಾಡನಿಂಗೆ
ಏಕಿತ್ತೆ ಧನವಿನಿತು,
ಪಾತ್ರವಲ್ಲದಗೆ?"
ಕರ್ಮವಿಂತೆನೆ, ಕರ್ತ
ನುಡಿಯಿತದಕಿಂತು ;
"ಕೆಲಸ ಗೈದವಗೆ ಫಲ
ವಿತ್ತೆ ನಾನಂತು.
ಅವನ ಪ್ರಾಪ್ತಿಯ ಅಳತೆ
ಬಲ್ಲವನು ನೀನು.
ನಿನ್ನದೇ ಆ ಗೊಡವೆ ;
ನೋಡಿಕೋ ನೀನು"

ಮಾರಂಗ



ಇಷ್ಟರಲಿ ಎಚ್ಚೆತ್ತು
ಕಂಡ ಸೋಮಿಲಕ;
ಮೂಟೆ ಹಗುರಾಗಿತ್ತು!
ಹೊಂದಿಬಲು ತವಕ,
ಬಿಚ್ಚಿ ನೋಡಲು, ಬರಿಯು
ಅವಲಕ್ಕಿಯಿತ್ತು!
ಹೊನ್ನವರಹಗಳೆಲ್ಲ
ಮಾಯವಾಗಿತ್ತು!
ಮರಳಿ ಹಿಂದೇ ಬಂದು
ಕಷ್ಟಾರ್ಜನೆಯಲಿ
ಮತ್ತೆ ನೂರನು ಗಳಿಸಿ
ಹೊರಡೆ ಅಡವಿಯಲಿ,

ಮೊದಲಿನಂತೇ ಮಾಯ
ವಾಯ್ತು ಅದುಕೂಡಾ!
ಮೂರನೇ ಬಾರಿಯೂ
ಅದೆ ಹಾಡು - ನೋಡಾ!
ಇನ್ನೇಕೆ ಬದುಕೆಂದು
ಕೊಂಡಡವಿಯಲ್ಲೇ,
ಕೊರಲಿಗುರುಲಿಕ್ಕಿಕೊಂ
ಡನು ಕೊಂಬೆಯಲ್ಲೇ.
"ನಿಲ್ಲು ತಡೆ!" ಯೆಂದು ಗೋ
ಚರಿಸಿತಾ ಕರ್ತ:
"ಕರ್ಮವೀರನೆ! ಏಕೆ
ಸಾಯುವಿಯೊ ವ್ಯರ್ಥ?
ನಿನಗೆ ಸಾಕಷ್ಟು ಹಣ
ಕೊಟ್ಟಿರುವೆನಲ್ಲಾ?
ವ್ಯಯಗೊಳಿಸಲಾಗದಾ
ಹಣದಾಶೆ ಸಲ್ಲ!
ನಿನಗೆಷ್ಟು ಪ್ರಾಪ್ತಿಯೋ
ಅಷ್ಟು ನಾ ಕೊಡುವೆ.
ಸಾಯಲೇತಕೆ ಪಾಪ,
ಕೇಳು, ವರ ಕೊಡುವೆ!"
ಆಗೆಂದ ಸೋಮಿಲಕ;
"ಎನಗೆ ಧನನೀಡು.
ವ್ಯಯಿಸುವದು, ಬಿಡುವು
ದೆನ್ನಿಚ್ಛೆ; ದಯಮಾಡು!

ಧನ ಬಹಳ ಬೇಕೆನಗೆ,
ಲೋಭಿಯೋ ವ್ಯಯಿಯೋ,
ಹಣದ ಪಸೆಯಿದ್ದರೇ
ನರಗೆ ನೆಮ್ಮದಿಯೋ!"
ನುಡಿಯಿತಾ ಕರ್ತ: "ಸರಿ,
ನಡೆ, ನಗರದಲ್ಲಿ
ಗುಪ್ತಧನ ಮತ್ತು ಉಪ
ಭುಕ್ತರಿಹರಲ್ಲಿ;
ಅವರನೊಮ್ಮೆಡಿ ಕಂಡು
ಬಾ, ಮತ್ತೆ ನಿನಗೆ
ಕೊಡುವೆ' ಎನೆ ಸೋಮಿಲಕ
ಹೊರಟನಾ ಕಡೆಗೆ.
ಪುರದೊಳಗೆ ಶೋಧಿಸುತ
ಗುಪ್ತಧನನಿರವ,
ಸಂಜೆಯಲಿ ಸೇರಿದನು
ಅವನ ಮನೆ ಕದವ.
ಹೋಗೆಂದು ಗುಪ್ತಧನ
ಬೈದರೂ, ನಿಂದ.
ಹಿಡಿಕೊಳನಿಕ್ಕಿ 'ಇದ
ತಿಂದು ಹೋಗೆ'ಂದ.
ಅದನುಂಡು ಸೋಮಿಲಕ
ನೊಂದು ಮೂಲೆಯಲಿ
ನಿದ್ರಿಸಲು, ಕರ್ತ ಕ
ರ್ಮಗಳು ಸ್ವಪ್ನದಲಿ



ತೋರಿ ಕರ್ಮವು ನುಡಿಯಿ
"ತಾ ಗುಪ್ತಧನನ
ಧನ ಕರಗುತಿದೆ, ಇವನಿ
ಗಿಕ್ಕಿದುದೆ ನೆವನ!"
ಕರ್ತವೆಂದಿತು: "ನರರ
ಲಾಭನಷ್ಟಗಳ
ಸರಿಗೊಳಿಪೆ ಹೀಗೆ ನೀ
ನೋಡುಳಿದುವುಗಳ"
ತಟ್ಟನೇ ಎಚ್ಚೆತ್ತು
ನೋಡೆ ಸೋಮಿಲಕ
ಮುಂಜಾವು ಮೂಡಿತ್ತು;
ಮಾಡಿದನು ಜಳಕ.





# ಭೈರವಶಾಸ್ತ್ರಿ

ಪೂರ್ವಕಾಲದಲ್ಲಿ ಕಳಿಂಗದೇಶವನ್ನು ಮಣಿಭದ್ರನೆಂಬ ಅರಸನು ಆಳುತ್ತಿದ್ದನು. ಆತನ ಮಂತ್ರಿಯ ಹೆಸರು ಇಂದುಶರ್ಮ. ಆತನು ತುಂಬಾ ಮೇಧಾವಿ. ಅರಮನೆಯ ನೌಕರರಿಂದ ಹಿಡಿದು ರಾಜನ ಬಂಧುಬಳಗವೆಲ್ಲಾ ಇಂದುಶರ್ಮನ ಮಾತಿನಪ್ರಕಾರ ನಡೆಯುತ್ತಿದ್ದುದರಿಂದ ರಾಜಕಾರ್ಯಗಳು ನಿರ್ವಿಘ್ನವಾಗಿ, ಸುಸೂತ್ರವಾಗಿ ಸಾಗುತ್ತಿದ್ದುವು.

ಅರಮನೆಯಲ್ಲಿ ಭೈರವಶಾಸ್ತ್ರಿ ಎಂಬ ವಿದೂಷಕನಿದ್ದನು. ಅವನು ಪ್ರತಿನಿತ್ಯವೂ ರಾಜನು ವಿರಾಮವಾಗಿರುವಾಗ ತನ್ನ ಹಾಸ್ಯಗಳಿಂದ ಆತನಿಗೆ ವಿನೋದವನ್ನುಂಟುಮಾಡುವುದು ಅವನ ಕರ್ತವ್ಯವಾಗಿತ್ತು.

ಭೈರವಶಾಸ್ತ್ರಿ ರಾಜನಹೊರತು ಬೇರೆ ಯಾರೊಂದಿಗೂ ಸಂಪರ್ಕಹೊಂದಿರಲಿಲ್ಲ. ಅವನು ಇತರರನ್ನು ಗಣನೆಗೇ ತಂದುಕೊಳ್ಳುತ್ತಿರಲಿಲ್ಲ. ರಾಜನಿಗೆ ತನ್ನ ಮೇಲೆ ಅನುಗ್ರಹವಿರುವಷ್ಟು ಕಾಲ ತಾನು ಯಾರಿಗೂ ಹೆದರಬೇಕಾಗಿಲ್ಲವೆಂದು ಅವನು ಭಾವಿಸಿದ್ದನು.

ಅವನ ಧೋರಣೆ ಮಂತ್ರಿಗೆ ಹಿಡಿಸಲಿಲ್ಲ. ಭೈರವಶಾಸ್ತ್ರಿಗೆ ಬುದ್ಧಿಕಲಿಸಲು ಆತನು ಪಣತೊಟ್ಟನು. ಅರಮನೆಯ ಮಹಾದ್ವಾರದ ಕಾವಲುಗಾರನನ್ನು ಕರೆದು "ಲೋ, ನಾಳೆಯಿಂದ ಭೈರವಶಾಸ್ತ್ರಿಯನ್ನು ಒಳಗೆ ಬಿಡಬೇಡ", ಎಂದು ಮಹಾಮಂತ್ರಿ ಆಜ್ಞಾಪಿಸಿದನು. ಮಾರನೇಯ ದಿನ ಯಥಾಪ್ರಕಾರ ಭೈರವಶಾಸ್ತ್ರಿ ರಾಜನ ದರ್ಶನಪಡೆಯಲು ಬಂದಾಗ, ದ್ವಾರಪಾಲಕನು "ಸ್ವಾಮಿ, ತಾವು ಒಳಗೆ ಪ್ರವೇಶಿಸಲು ಅನುಮತಿಯಿಲ್ಲ. ತಮ್ಮನ್ನು ಒಳಗೆ ಬಿಡಬಾರದೆಂದು ಆಜ್ಞೆಯಾಗಿದೆ" ಎಂದನು.

ಶಾಸ್ತ್ರಿಗೆ ಆಶ್ಚರ್ಯವಾಯಿತು. ಏನೋ ಅಚಾತುರ್ಯ ನಡೆದಿರಬೇಕೆಂದು ಊಹಿಸಿದ. ಹಿಂದಿನ ರಾತ್ರಿ ರಾಜನು ತನ್ನೊಂದಿಗೆ ನಗುನಗುತ್ತಾ ಬಹು ಸಲುಗೆಯಿಂದ ಮಾತನಾಡಿದ್ದಾನೆ! ಇಷ್ಟರಲ್ಲಿ ಏನು ನಡೆದಿರಬಹುದು? ಅವನಿಗೇನೂ ಅರ್ಥವಾಗಲಿಲ್ಲ. "ಮಹಾಪ್ರಭೂ, ನನಗೇಕೆ ಉಚ್ಚಾಟನೆ?

ಪಿ. ರಾಮನಾಥಶಾಸ್ತ್ರಿ

ನನ್ನಿಂದ ನಡೆದ ಅಪರಾಧವೇನೋ ತಿಳಿಸಿದರೆ ತಿದ್ದಿಕೊಳ್ಳುತ್ತೇನೆ" ಎಂದು ಒಂದು ಚೀಟಿ ಬರೆದು ಶಾಸ್ತ್ರಿ ಒಳಕ್ಕೆ ಕಳುಹಿಸಿದನು.

ಆ ಚೀಟಿ ಮಹಾಮಂತ್ರಿಯ ಕೈಗೆ ಹೋಗಿ ಕಸದಬುಟ್ಟಿಯನ್ನು ಕಂಡಿತು.

ಎರಡು ದಿವಸ ಶಾಸ್ತ್ರಿ ಅರಮನೆಗೆ ಬಾರದಿರಲು ರಾಜನು "ಇತ್ತೀಚೆಗೆ ಶಾಸ್ತ್ರಿ ಕಾಣಿಸುತ್ತಿಲ್ಲವಲ್ಲಾ, ಕಾರಣವೇನು?" ಎಂದು ತನ್ನ ಸರದಾರನನ್ನು ಕೇಳಿದನು.

ಯಾರನ್ನು ಕೇಳಿದರೂ ತಮಗೆ ತಿಳಿಯದೆಂದರು. ಮಹಾಮಂತ್ರಿಯನ್ನು ಒಂದುಸಾರಿ ಪ್ರಶ್ನಿಸಲು, ಆತನು "ಮಹಾಪ್ರಭು, ಭೈರವ ಶಾಸ್ತ್ರಿ ಸಖತ್ ಕಾಯಿಲೆಯಿಂದ ನಿನ್ನೆರಾತ್ರಿ ಮರಣಹೊಂದಿದನು. ನಾನು ಹೋಗಿ ಅವನ ಅಂತ್ಯಕ್ರಿಯೆಗಳನ್ನು ಮಾಡಿಸಿ ಈಗತಾನೇ ಬರುತ್ತಿದ್ದೇನೆ" ಎಂದು ಹೇಳಿದನು.

ರಾಜನಬಳಿಯಿಂದ ಯಾವ ಉತ್ತರವೂ ಬಾರದಿರಲು ಭೈರವಶಾಸ್ತ್ರಿ ತನ್ನ ಚೀಟಿ ಮಹಾರಾಜರಿಗೆ ತಲುಪಲಿಲ್ಲವೆಂದು ಗ್ರಹಿಸಿದನು. ನನಗೆ ಅರಮನೆಯಲ್ಲಿ ಸ್ನೇಹಿತರು ಯಾರೂ ಇಲ್ಲ. 'ಮಹಾರಾಜರು ಹೊರಗೆ ಬಂದಾಗ ಅವರನ್ನು ನೇರವಾಗಿ ಭೇಟಿಮಾಡುವುದು ಉತ್ತಮ' ಎಂದು ಸದವಕಾಶಕ್ಕಾಗಿ ಕಾಯುತ್ತಿದ್ದನು. ಒಂದುದಿನ ಸಾಯಂಕಾಲ ರಾಜ, ಮಂತ್ರಿ ಮತ್ತಿತರ ಪರಿವಾರ ಕುದುರೆಗಳನ್ನೇರಿ ವಾಯುವಿಹಾರಕ್ಕೆ ಹೊರಟರು. ಮಹಾರಾಜರಿಗೆ ಅಷ್ಟು ದೂರದಲ್ಲಿ ಶಾಸ್ತ್ರಿ ಕಾಣಿಸಿಕೊಂಡನು. ಆತನಿಗೆ ಆಶ್ಚರ್ಯ



ವಾಯಿತು. ರಾಜನು ಆಕಡೆಗೆ ತೋರಿಸುತ್ತಾ "ಅಮಾತ್ಯರೇ, ಅದೋ ಅಲ್ಲಿ ಭೈರವಶಾಸ್ತ್ರಿ ನಿಂತಿದ್ದಾನೆ. ಆತನು ಮರಣಪಟ್ಟನೆಂದು ಹೇಳಿದಿರಿ?" ಎಂದ ರಾಜ.

ಮಂತ್ರಿ ಕೂಡಲೇ "ಹೌದು ಮಹಾಸ್ವಾಮಿ. ಭೈರವಶಾಸ್ತ್ರಿ ಭೂತವಾಗಿ ಇಲ್ಲಿ ಕಾಣಿಸಿಕೊಂಡಿದ್ದಾನೆ" ಎಂದು ಉತ್ತರವಿತ್ತನು. ಎಲ್ಲರಿಗೂ ಮಂತ್ರಿಯ ಮಾತೇ ವೇದವಾಕ್ಯ. ಉಳಿದವರೆಲ್ಲ "ಮಹಾಪ್ರಭು, ಭೈರವಶಾಸ್ತ್ರಿ ಭೂತವಾಗಿ ಇಲ್ಲಿ ಅಲೆದಾಡುತ್ತಿರುತ್ತಾನೆ! ಅಲ್ಲಿ ಕಾಣಿಸುತ್ತಿರುವುದು ಶಾಸ್ತ್ರಿಯಭೂತ" ಎಂದರು.

ಭೈರವಶಾಸ್ತ್ರಿಗೇ ಈ ಮಾತುಗಳು ಕೇಳಿಸಿದುವು. ಅವನಿಗೆ ತನ್ನ ತಪ್ಪು ತಿಳಿಯಿತು. ಅವನು ಒಂದು ಶ್ಲೋಕವನ್ನು ಬರೆದು, ರಾಜನು ಅರಮನೆಗೆ ಹಿಂತಿರುಗುವಾಗ ಆತನ ಕೈಗೆ ಒಪ್ಪಿಸಿದನು. ರಾಜನು ಚೀಟಿಬಿಚ್ಚಿ ನೋಡಲು ಈ ರೀತಿ ಒಂದು ಶ್ಲೋಕವಿತ್ತು:

ರಾಷ್ಟ್ರಃ ಸೇವ್ಯೋ, ನೃಪಃ ಸೇವ್ಯಃ
ನ ಸೇವ್ಯಃ ಕೇವಲೋ ನೃಪಃ
ರಾಷ್ಟ್ರ ವಕ್ರ ಪ್ರಭಾವೇನ
ಭೈರವೋ ಭೂತತಾಂಗತಃ

[ರಾಜನೊಂದಿಗೆ ಪರಿವಾರವನ್ನೂ ಸೇವಿಸಬೇಕು, ಕೇವಲ ರಾಜನನ್ನುಮಾತ್ರವೇ ಸೇವಿಸಬಾರದು. ಪರಿವಾರದ ಅನುಗ್ರಹವಿಲ್ಲವಾದ ಕಾರಣ ಭೈರವನು ಜೀವಿಸಿರುವಾಗಲೇ ಭೂತವಾದನು.]

ರಾಜನಿಗೆ ನಡೆದ ವಿಷಯ ಅರ್ಥವಾಯಿತು. ಆತನು ಸಚಿವನೊಂದಿಗೆ "ಭೈರವಶಾಸ್ತ್ರಿ ಮರಣಿಸಿ ಭೂತವಾದನೆಂದು ಸುಳ್ಳು ಹೇಳಿದಿರೇಕೆ?" ಎಂದು ಕೇಳಿದನು.

ಮಂತ್ರಿ ನಡೆದಿದ್ದು ನಡೆದ ಹಾಗೆ ರಾಜನಿಗೆ ತಿಳಿಸಿದನು. ಒಬ್ಬ ವಿದೂಷಕನಿಗಾಗಿ ಸಮರ್ಥನಾದ ಸಚಿವನನ್ನು ಕಳೆದುಕೊಳ್ಳುವುದುಂಟೇ? ಆದುದರಿಂದ ರಾಜನು ಮಂತ್ರಿಯ ವರ್ತನೆಯಲ್ಲಿ ತಪ್ಪುಹುಡುಕದೆ, ಭೈರವಶಾಸ್ತ್ರಿ ಮತ್ತೆ ಅರಮನೆಗೆ ಬರಲು ಅವಕಾಶ ಕೊಡುವಂತೆ ಸವಿಮಾತಿನಲ್ಲಿ ಸಚಿವನೊಂದಿಗೆ ಹೇಳಿದನು.

ಭೈರವಶಾಸ್ತ್ರಿ ಅಂದಿನಿಂದ ಅಧಿಕಾರಿಗಳೊಂದಿಗೆ ಸವಿನಯದಿಂದಿದ್ದನು.






## 16

[ಹಸನ್‌ಗೋರಿಯೊಂದಿಗೆ ಪಿಂಗಳನು ಇಷೀದುರ್ಗದ ಬಾಗಿಲು ತೆರೆಯಲು ಕಳ್ಳರು ಅದರ ಹಿಂದೆ ಇಟ್ಟಿದ್ದ ಮದ್ದು ಸಿಡಿದು ಕೆಲವು ಸೈನಿಕರಿಗೆ ಗಾಯಗಳಾದುವು. ತರುವಾಯ ಕಳ್ಳರ ನಾಯಕ ರಣಹದ್ದು ಬೆಟ್ಟಗಾಡಿನಲ್ಲಿ ಕಾಣಿಸಿಕೊಂಡನು. ಅಲ್ಲಿ ಹೋರಾಟ ನಡೆಯುವಾಗ ಪಿಂಗಳನಿಗೆ ಹಠಾತ್ತನೆ ಮಾಂತ್ರಿಕನಾದ ಪದ್ಮಪಾದನು ಕಾಣಿಸಿದನು. ತರುವಾಯ—]

ಮಹಾಮಾಂತ್ರಿಕನಾದ ಪದ್ಮಪಾದನನ್ನು ಮತ್ತೆ ತನ್ನ ಜನ್ಮದಲ್ಲೇ ನೋಡುವೆನೆಂದು ಪಿಂಗಳನು ಭಾವಿಸಿರಲಿಲ್ಲ. ಹಾಗಿರಲು ಪದ್ಮಪಾದನಿಂದು ಹಠಾತ್ತನೆ ಅವಂತಿನಗರಕ್ಕೆ ಸಾವಿರಾರು ಮೈಲು ದೂರದಲ್ಲಿರುವ ಒಂದು ಮರುಭೂಮಿಯಲ್ಲಿ ಕಂಡುಬರಲು ಪಿಂಗಳನಿಗೆ ಅಮಿತಾಶ್ಚರ್ಯವಾಯಿತು. ಆದರೆ ಆಶ್ಚರ್ಯ ಸ್ವಲ್ಪಹೊತ್ತು ಮಾತ್ರ. ಮರುಕ್ಷಣವೇ ಅವನ ಅಚ್ಚರಿಯು ಅನುಮಾನವಾಗಿ ಬದಲಾಯಿಸಿತು. ಅವನು ತನ್ನ ಪಕ್ಕದಲ್ಲಿದ್ದ ಹಸನ್‌ಗೋರಿಯಕಡೆ ನೋಡಿದನು.

ಹಸನ್‌ಗೋರಿಯ ಮುಖದಲ್ಲೂ ಅನುಮಾನ ಸಂಶಯಗಳು ಮೂಡಿದ್ದುವು. ಆತನು ಪಿಂಗಳನ ಭುಜವನ್ನು ಹಿಡಿದು ಅಲುಗಿಸಿ ಮೆಲ್ಲನಿಯಿಂದ "ಪಿಂಗಳಾ, ಈ ಪದ್ಮಪಾದನೆಂದರೆ ಯಾರು? ಬಲ್ಲೆಯಾ ಇವನನ್ನು? ಮರುಭೂಮಿಕಳ್ಳ ರಣಹದ್ದು ಅಲ್ಲವಷ್ಟೆ?" ಎಂದು ಮೆಲ್ಲನೆ ಕೇಳಿದ.

ಪಿಂಗಳನು ಅದಕ್ಕೆ ಉತ್ತರ ಕೊಡುವಷ್ಟರಲ್ಲಿ ಪದ್ಮಪಾದನು ಅವರನ್ನು ಸಮೀಪಿಸಿದನು. ಆತನು ಹಸನ್‌ಗೋರಿಯಕಡೆ ಬೆರಳು ಮಾಡಿ ಪಿಂಗಳನನ್ನು ನೋಡುತ್ತ "ಪಿಂಗಳಾ,





ಯದು. ಆದರೆ..." ಎಂದೇನೋ ಹೇಳ ಹೋಗಿ ಅಷ್ಟಕ್ಕೆ ನಿಲ್ಲಿಸಿ ಸುಮ್ಮನಾದ.

ಈ ಸಾರಿ ಪದ್ಮಪಾದನು ಗಹಗಹಿಸಿ ನಕ್ಕನು. ಆತನು ಪಿಂಗಳನನ್ನು ಸಮೀಪಿಸಿ ಅವನ ಭುಜವನ್ನು ಪ್ರೀತಿಯಿಂದ ನೇವರಿಸುತ್ತಾ "ಪಿಂಗಳಾ, ಇನ್ನೂ ಯೋಚಿಸುವೆಯಲ್ಲಾ! ಈಗ, ಈ ಪರ್ವತಪ್ರಾಂತಗಳಿಂದ ಪರಾರಿ ಯಾದ ಮರುಭೂಮಿ ಕಳ್ಳರ ನಾಯಕನು ನಾನೆಂದು ನೀವು ಅನುಮಾನಪಡುತ್ತಿಲ್ಲ ವಷ್ಟೇ?" ಎಂದು ಕೇಳಿದನು.

"ಇಲ್ಲ ಪದ್ಮಪಾದ" ಎಂದು ಪಿಂಗಳನು ಹಸನ್‌ಗೋರಿಯ ಕಡೆ ತೋರಿಸುತ್ತಾ "ಈತನು ನವಾಬರ ಒಂಟೆಪಡೆಯ ನಾಯಕ. ಹೆಸರು ಹಸನ್‌ಗೋರಿ. ರಣಹದ್ದು ಎಂಬ ಬಹಳ ಕ್ರೂರನಾದ ದರೋಡೆಕಾರನಿಗಾಗಿ ಇವರು ಈ ಪ್ರಾಂತದಲ್ಲೆಲ್ಲಾ ಶೋಧಿಸು ತ್ತಿದ್ದಾರೆ" ಎಂದ.

ಪದ್ಮಪಾದನು ಆ ಮಾತುಗಳನ್ನು ಕೇಳಿದ ಕೂಡಲೇ, ಹಸನ್‌ಗೋರಿ ಕಡೆ ತಿರುಗಿ "ಅಯ್ಯಾ, ನೀವು ಮರುಭೂಮಿ ರಕ್ಷಕ ಭಟರ ನಾಯಕರಾದರೆ, ನೀವು ರಕ್ಷಿಸಬೇಕಾದ ಕೆಲವಾರು ವರ್ತಕರು, ಅಲ್ಲಿ ಕಾಣಿಸುತ್ತಿರುವ ಗುಹೆಯಲ್ಲಿ ಬಂಧಿತರಾಗಿದ್ದಾರೆ. ಅವರಿಗೆ ಕೂಡಲೇ ಸಹಾಯನೀಡಿ. ಬೇಗನೇ ಹೊರಡಿ" ಎಂದನು.

ಹಸನ್‌ಗೋರಿಗೆ ಪದ್ಮಪಾದನಲ್ಲಿ ನಂಬಿಕೆ ಯುಂಟಾಗಲಿಲ್ಲ. ಅದನ್ನು ಗ್ರಹಿಸಿದ ಪಿಂಗ

ನಿನ್ನೊಂದಿಗಿರುವ ಈತನು ಯಾರು?" ಎಂದು ಪ್ರಶ್ನಿಸಿದನು. ಆ ಪ್ರಶ್ನೆಯನ್ನು ಕೇಳಿ ಪಿಂಗಳನು ಮತ್ತಷ್ಟು ಪೇಚಿನಲ್ಲಿ ಸಿಲುಕಿದನು.

ಅವನು ತಡಬಡಿಸುತ್ತಿರುವುದನ್ನು ಕಂಡು ಪದ್ಮಪಾದನು ಕಿರುನಗೆ ಬೀರುತ್ತಾ "ಪಿಂಗಳಾ, ನಿನಗೆ ನನ್ನಲ್ಲಿಕೂಡಾ ಏನೋ ಒಂದುಬಗೆಯ ಸಂಶಯಃವಿರುವಂತೆ ತೋರು ವುದು" ಎಂದು ಕೇಳಿದನು.

ಪಿಂಗಳನಿಗೆ ಏನು ಉತ್ತರ ಹೇಳಲೂ ತೋರದಾಯಿತು. ಅವನು ತನ್ನ ದೃಷ್ಟಿ ಯನ್ನು ಪದ್ಮಪಾದನಿಂದ ಹಸನ್‌ಗೋರಿಯ ಕಡೆ ಹೊರಳಿಸಿದನು.

ಆಗ ಹಸನ್‌ಗೋರಿ ಪದ್ಮಪಾದನತ್ತ ಬಂದು "ಅಯ್ಯಾ, ತಾವು ಯಾರೋ ನನಗೆ ತಿಳಿ



ಳನು ಆತನೊಂದಿಗೆ "ಹಸನ್, ನೀವು ಈ ಪದ್ಮ ಪಾದನನ್ನು ನನ್ನಬಳಿ ಬಿಡಿ. ಇವರ ವಿಷಯ ನಾನು ನೋಡಿಕೊಳ್ಳುತ್ತೇನೆ. ನೀವೇನೂ ಭಯಪಡಬೇಕಾಗಿಲ್ಲ. ಇವರಿಂದ ಎಲ್ಲ ವಿಷಯ ವನ್ನು ನಾನು ತಿಳಿದುಕೊಳ್ಳುತ್ತೇನೆ. ಒಂದು ವೇಳೆ ಈತನೇ ಕಳ್ಳರ ನಾಯಕ ರಣಹದ್ದು ಆಗಿದ್ದರೆ, ಈತನನ್ನು ಬಂಧಿಸಿ ನಿಮಗೆ ಒಪ್ಪಿ ಸುವ ಭಾರ ನನಗಿರಲಿ" ಎಂದ.



ಪಿಂಗಳನು ಕೊಟ್ಟ ಭರವಸೆಯಿಂದ ಹಸನ್ ಗೋರಿ ಸಂಶಯ ಕಳೆದು ಸಂತೃಪ್ತನಾದ. ಅವನು ತನ್ನ ಭಟರನ್ನು ಕರೆದುಕೊಂಡು ಪದ್ಮಪಾದನು ತೋರಿಸಿದ ಗುಹೆಯಕಡೆ ವೇಗವಾಗಿ ಹೊರಟನು.

"ಪಿಂಗಳಾ, ಈ ಪರದೇಶದಲ್ಲಿ, ಮರು ಭೂಮಿಪ್ರಾಂತದ ಬೆಟ್ಟಗಾಡಿನಲ್ಲಿ ನಿನ್ನನ್ನು ನೋಡುತ್ತಿರುವುದು ನನಗೆ ಬಹಳ ಅಚ್ಚರಿ ಯಾಗಿದೆ. ಅಲ್ಲಯ್ಯಾ, ನೀನು ಅವಂತಿ ನಗರ ದಲ್ಲಿರುವ ನಿನ್ನ ಸ್ವಗೃಹವನ್ನು ತೊರೆದು ಇಷ್ಟು ದೂರ ಬರಲು ಕಾರಣವೇನು" ಎಂದು ಪ್ರಶ್ನಿಸಿದ ಪದ್ಮಪಾದ.

"ಪದ್ಮಪಾದ, ನನ್ನದು ಅತಿ ಕರುಣಾ ಜನಕವಾದ ಕಥೆ. ಅದನ್ನು ಯೋಚಿಸುವಾಗ ಅತ್ಯಂತ ದುಃಖವಾಗುತ್ತದೆ. ನೀವು ಕೊಟ್ಟ ಮಹಿಮೆಯುಳ್ಳ ಚೀಲ, ಐಶ್ವರ್ಯ ಮತ್ತು ಆಪತ್ಸಮಯದಲ್ಲಿ ಸಹಾಯ ಮಾಡುತ್ತಿದ್ದ ಭಲ್ಲೂಕಕೇತ ಎಲ್ಲವನ್ನೂ ನಿರ್ಭಾಗ್ಯನಾದ ನಾನು ಕಳೆದುಕೊಂಡೆ. ದುರುಳರೂ, ಕ್ಷುದ್ರರೂ ಆದ ನನ್ನ ಸಹೋದರರು ಈ ದುರವಸ್ಥೆಗೆ ಕಾರಣಭೂತರು. ನಿಮ್ಮಿಂದ ಅಪ್ಪಣೆಪಡೆದು ನನ್ನ ಸ್ವಗೃಹ ಸೇರಿದಾಗ ಲಿಂದ ಇಂದಿನತನಕ ನಾನು ಅನುಭವಿಸಿದ ಯಾತನೆಗಳನ್ನು ತಿಳಿಸಬೇಕೆಂದರೆ ಬಹಳಕಾಲ ಬೇಕಾದೀತು. ಸದ್ಯಕ್ಕೆ ಇಷ್ಟೇ ಹೇಳಿದ್ದೇನೆ. ಇರಲಿ, ನೀವು ಈ ದೇಶಕ್ಕೆ ಯಾವ ಕಾರಣ ದಿಂದ ಬಂದಿರುವಿರೋ ತಿಳಿಸಿ. ಮತ್ತೊಬ್ಬ ಮಾಂತ್ರಿಕನನ್ನು ಜಯಿಸಲು ಬಂದಿದ್ದರೆ ನಾನು ಇನ್ನೊಮ್ಮೆ ಉತ್ಸಾಹದಿಂದ ನಿಮಗೆ ಸಹಾಯ ಮಾಡುತ್ತೇನೆ" ಎಂದ ಪಿಂಗಳ.

ಪಿಂಗಳನ ಮಾತು ಕೇಳಿ ಪದ್ಮಪಾದನಿಗೆ ಆನಂದವಾಯಿತು. ಅವನು ಹಣ ಮತ್ತು ಚೀಲವನ್ನು ಕಳೆದುಕೊಂಡ ವಿಷಯ ಕೇಳಿ





ಶಿಸಲು ಹೊರಟಿರುವೆನು. ಆದುದರಿಂದಲೇ ನಾನೊಬ್ಬ ಯಾತ್ರಿಕನ ವೇಷ ಧರಿಸಿಕೊಂಡು, ವರ್ತಕರ ತಂಡದೊಂದಿಗೆ ಈ ಪ್ರಾಂತವನ್ನು ಸೇರಿದೆ. ಇಂದು ಸಾಯಂಕಾಲ ಹಠಾತ್ತನೆ ನಮ್ಮ ತಂಡದಮೇಲೆ ಕಳ್ಳರು ಬಿದ್ದು, ಸುಲಿಗೆ ಮಾಡಿ, ಆ ವರ್ತಕರನ್ನೆಲ್ಲಾ ಅದೋ ಅಲ್ಲಿ ಕಾಣಿಸುತ್ತಿರುವ ಗುಹೆಯಲ್ಲಿ ಬಂಧಿಸಿದ್ದಾರೆ" ಎಂದ ಪದ್ಮಪಾದ.

ಈ ಸಂಗತಿಯನ್ನು ಕೇಳಿ ಪಿಂಗಳನು ಅತ್ಯಾಶ್ಚರ್ಯಪಟ್ಟನು. ಅವನು ಪದ್ಮಪಾದ ನೊಂದಿಗೆ "ಪದ್ಮಪಾದ, ಆ ವರ್ತಕರ ಸಂಗಡ ಮಹಾಮಾಂತ್ರಿಕರಾದ ನೀವೇ ಇದ್ದರೂ ಈ ರೀತಿಯಾಗಿ ನಡೆಯಿತೆಂದರೆ ನಂಬಲಸಾಧ್ಯ ವಾಗಿದೆ. ಕಳ್ಳರು ವರ್ತಕರಮೇಲೆ ಬಿದ್ದು ಅತ್ಯಾಚಾರ ಮಾಡುತ್ತಿರಲು ನೀವು ಸುಮ್ಮನೆ ನೋಡುತ್ತಾ ಇದ್ದಿರಾದರೂ ಹೇಗೆ?"

ಪದ್ಮಪಾದನು ಮುಗುಳು ನಗುತ್ತಾ "ಪಿಂಗಳಾ, ನಾನು ಆ ವರ್ತಕರ ತಂಡ ದೊಂದಿಗೆ ಹೊರಟಾಗ, ನಾನೊಬ್ಬ ಯಾತ್ರಿಕ ನೆಂದು ಹೇಳಿದ್ದೆ. ಮಾಂತ್ರಿಕನೆಂದು ಹೇಳಲಿಲ್ಲ. ಒಂದುವೇಳೆ ನನ್ನ ನಿಜಸಂಗತಿಯನ್ನು ತಿಳಿ ಸಿದ್ದರೆ ನನ್ನನ್ನು ಖಂಡಿತ ತಮ್ಮೊಂದಿಗೆ ಹೊರಡಲು ಅವರು ಅವಕಾಶಕೊಡುತ್ತಿರಲಿಲ್ಲ. ಆ ಕಾರಣದಿಂದ ದರೋಡೆಕಾರರು ದೋಚಿ ಕೊಳ್ಳುತ್ತಿದ್ದರೂ ಸಹ, ನಾನು ನನ್ನ ರಹಸ್ಯ ಹೊರಬೀಳದಿರಲು, ನನ್ನ ಮಂತ್ರತಂತ್ರ ಗಳನ್ನು ಕಳ್ಳರಮೇಲೆ ಪ್ರಯೋಗಿಸದೆ, ಓಡಿ

ತುಂಬಾ ದುಃಖಪಟ್ಟನು. ಹಿಂದೆ ಭಲ್ಲೂಕ ಪರ್ವತದಬಳಿ ಪ್ರಚಂಡ ಮಂತ್ರವಾದಿ ಮಹಾ ಮಾಯನನ್ನು ಜಯಿಸುವುದರಲ್ಲಿ ಪಿಂಗಳನು ತನಗೆ ನೀಡಿದ ಸಹಾಯವನ್ನು ಪದ್ಮಪಾದನು ಸದಾ ನೆನೆಸಿಕೊಳ್ಳುತ್ತಿದ್ದನು.

"ನಾನು ಮತ್ತೆ ಯಾವ ಮಾಂತ್ರಿಕನನ್ನೂ ಜಯಿಸಲು ಬರಲಿಲ್ಲ. ಮಹಾಮಾಯನ ಸಮಾಧಿಯಿಂದ ನಾವು ಸಂಪಾದಿಸಿದ ಅಪೂರ್ವ ವಸ್ತುಗಳು ನನ್ನಬಳಿಯಿರುವಷ್ಟು ಕಾಲ ಮತ್ತಾವ ಮಾಂತ್ರಿಕನ ಗೊಡವೆಯೂ ನನಗೆ ಬೇಕಾಗಿಲ್ಲ. ಈ ಪ್ರಪಂಚದಲ್ಲಿ ನಾನು ಯಾರಿಗೂ ಭಯಪಡ ಬೇಕಾಗಿಯೂ ಇಲ್ಲ. ಈಗ ನಾನು ಹೊಸ ಹೊಸ ದೇಶಗಳನ್ನು ನೋಡಲು, ಯಾತ್ರಾಸ್ಥಳಗಳನ್ನು ಸಂದ





ಬಂದು ಈ ಕಲ್ಲುಬಂಡೆಗಳ ಮರೆಯಲ್ಲಿ ಬಚ್ಚಿಟ್ಟುಕೊಂಡೆ" ಎಂದ ಪದ್ಮಪಾದ.

"ನಿಮ್ಮ ವರ್ತನೆ ನನಗೆ ತುಂಬಾ ವಿಸ್ಮಯವಾಗಿದೆ, ಪದ್ಮಪಾದ" ಎಂದ ಪಿಂಗಳ. "ನಿಮ್ಮಬಳಿಯಿರುವ ಅದ್ಭುತ ವಸ್ತುಗಳಾದ ಗೋಳ, ಉಂಗರ, ವಜ್ರದಹಿಡಿಯುಳ್ಳಖಡ್ಗ— ಇವುಗಳಲ್ಲಿ ಯಾವುದಾದರೊಂದರ ಸಹಾಯದಿಂದ ನೀವು ನೋಡಬೇಕೆಂದ ಸ್ಥಳವನ್ನು ಪ್ರಯಾಸವಿಲ್ಲದೆ ನೋಡಬಹುದಿತ್ತಲ್ಲಾ! ಹಾಗಿರಲು ಈ ಮಾರ್ಗಾಯಾಸವೇಕೆ? ಈ ವರ್ತಕರ ತಂಡದೊಂದಿಗೆ ಪ್ರವಾಸಮಾಡಲೇಕೆ? ಇಷ್ಟೆಲ್ಲಾ ಕಷ್ಟಗಳನ್ನು ಅನುಭವಿಸಿ ನಡೆಯಬೇಕಾದ ಅವಶ್ಯವೇನಿತ್ತು?" ಎಂದು ಪದ್ಮಪಾದನನ್ನು ಕೇಳಿದ ಪಿಂಗಳ.

"ಪಿಂಗಳಾ, ನಾನು ಆ ಕಳ್ಳರ ನಾಯಕನಾದ ರಣಹದ್ದೆಂದು ನೀನು ಇನ್ನೂ ಅನುಮಾನಿಸುತ್ತಿಲ್ಲತಾನೇ?" ಎಂದು ಪದ್ಮಪಾದನು ಪಿಂಗಳನನ್ನು ಎವೆಯಿಕ್ಕದೆ ಕ್ಷಣಮಾತ್ರ ದಿಟ್ಟಿಸಿ ನೋಡಿ "ನೀನು ಕೇಳುವುದು ಸಹಜವೇ. ಆದರೆ ಪಿಂಗಳಾ, ಹೊಸ ಹೊಸ ದೇಶಗಳಲ್ಲಿ ಸುತ್ತುತ್ತಾ, ಅಲ್ಲಲ್ಲಿರುವ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ, ಆ ಫಲವನ್ನು ಅನುಭವಿಸಬೇಕಾದರೆ, ಎಲ್ಲರಂತೆ ನಾನೂ ಪಾದಚಾರಿಯಾಗಿ ಹೋಗಬೇಕು. ನನ್ನ ಅದ್ಭುತಶಕ್ತಿಯ ಸಹಾಯದಿಂದ ಕ್ಷಣಮಾತ್ರದಲ್ಲಿ ನೆನೆಸಿಕೊಂಡ ಸ್ಥಳ ಸೇರುವುದರಿಂದ ಯಾತ್ರಾಫಲ ಲಭಿಸುವುದಿಲ್ಲ. ತಿಳಿಯಿತೆ?" ಎಂದ.

ಅವರಿಬ್ಬರು ಮಾತನಾಡುತ್ತಿರಲು ತುಸ ದೂರದಲ್ಲಿ ಹಸನ್‌ಗೋರಿಯ ಭಟರ ಕೋಲಾಹಲದೊಂದಿಗೆ ವರ್ತಕರ ಗೋಳಾಟ, ಅರಚಾಟಗಳು ಕೇಳಿಬಂದುವು. ಆ ರಣಗೊಣಧ್ವನಿಯಿಂದ ಆ ಪ್ರದೇಶದಲ್ಲಿ ಬಹುದೊಡ್ಡ ಗೊಂದಲವೆದ್ದಿತು. ಪಿಂಗಳ ಮತ್ತು ಪದ್ಮಪಾದರು ತಮ್ಮ ಸಂಭಾಷಣೆಯನ್ನು ನಿಲ್ಲಿಸಿ, ಅತ್ತಕಡೆ ನೋಡಿದರು.

ಆಗ ಒಬ್ಬ ಸೈನಿಕನು ಓಡುತ್ತಾ ಪಿಂಗಳನ ಬಳಿಗೆ ಬಂದು "ರಣಹದ್ದನ್ನು ಅಟ್ಟಿಕೊಂಡು ಹೋಗಿ ಹಿಡಿಯಲು ನಿಮ್ಮ ಸಹಾಯವನ್ನು ನಮ್ಮ ಹಸನ್‌ಗೋರಿ ಸರದಾರರು ಕೋರುತ್ತಿದ್ದಾರೆ! ನೀವು ತಡಮಾಡದೆ ಕೂಡಲೇ ಒರಬೇಕಂತೆ" ಎಂದ.



ಪಿಂಗಳನು ಪದ್ಮಪಾದನಕಡೆ ನೋಡಿ ಪ್ರಾರ್ಥನಾಸ್ವರದಲ್ಲಿ "ಪದ್ಮಪಾದ, ಈ ಹಸನ್‌ಗೋರಿ ನಾನು ಮರುಭೂಮಿಯಲ್ಲಿ ಹಸಿವು ಬಾಯಾರಿಕೆಗಳಿಂದ ಸಾಯುದಂತೆ ನನಗೆ ತಿಂಡಿ ತೀರ್ಥಗಳನ್ನು ಕೊಡಿಸಿ ಕಾಪಾಡಿದ್ದಾನೆ. ನಾನು ಇದಕ್ಕೆ ಪ್ರತಿಯಾಗಿ ಆತನಿಗೆ ಯಾವುದಾದರೂ ಸಹಾಯಮಾಡಲು ನಿಶ್ಚಯಿಸಿದ್ದೇನೆ. ಈ ಕತ್ತಲೆಯಲ್ಲಿ ಆ ಕಳ್ಳನನ್ನು ಹಿಡಿಯುವುದು ಮಾನವರಿಂದ ಸಾಧ್ಯವಿಲ್ಲ. ಆ ಕಳ್ಳರೂ, ಅವರ ನಾಯಕನಾದ ರಣಹದ್ದೂ ತುಂಬಾ ಕ್ರೂರಿಗಳು. ಇಲ್ಲಿಗೆ ಸಮೀಪದಲ್ಲಿರುವ ದುರ್ಗದ ಭಟರನ್ನೆಲ್ಲಾ ಕೊಲೆಮಾಡಿ, ಕಪಟೋಪಾಯದಿಂದ ನಮ್ಮನ್ನೂಸಹ ಕೊಲ್ಲಲು ಪ್ರಯತ್ನಿಸಿದರು. ಆದುದರಿಂದ ಈ ತುಡುಗರನ್ನು ಹಿಡಿಯುವ ಕಾರ್ಯದಲ್ಲಿ ನೀವು ನಿಮ್ಮ ಅದ್ಭುತ ಶಕ್ತಿಗಳನ್ನು ಪ್ರಯೋಗಿಸಿ ನಮಗೆ ಸಹಾಯ ಮಾಡಬೇಕೆಂದು ನನ್ನ ಪ್ರಾರ್ಥನೆ. ಹಾಗೆ ಮಾಡಿದರೆ ಈ ಪ್ರದೇಶದಲ್ಲಿ ಸಂಚರಿಸುವ ಪ್ರವಾಸಿಗರಿಗೆ ಅಪ್ರತ್ಯಕ್ಷವಾಗಿ ನೀವು ಸಹಾಯ ಮಾಡಿದಂತಾಗುತ್ತದೆ. ಆ ಪುಣ್ಯ ನಿಮ್ಮಪಾಲಿಗಿರುತ್ತದೆ" ಎಂದನು.

"ಪಿಂಗಳ, ನೀನು ತುಂಬಾ ಕೇಳುತ್ತಿರುವೆಯಾದುದರಿಂದ ನಾನು ಸಹಾಯಮಾಡುವೆನು. ಆಗ ಅಲ್ಲಿ ಬಂಧಿತರಾಗಿರುವ ವರ್ತಕರಿಗೆಲ್ಲಾ ನಾನೊಬ್ಬ ಮಾಂತ್ರಿಕನೆಂದು ತಿಳಿದುಬಿಡುತ್ತದೆ. ನಂತರ ಅವರೊಂದಿಗೆ ನಾನು ಪ್ರಯಾಣಮಾಡುವುದು ಅಸಂಭವ. ಸರಿ,



ಆದು ಮತ್ತೆ ನೋಡಿಕೊಳ್ಳುವೆನು. ನನಗೆ ಯಾತ್ರಾಸ್ಥಳಗಳನ್ನು ನೋಡಲು ಅನೇಕ ಮಾರ್ಗಗಳಿವೆ" ಎಂದು ಹೇಳಿ ಅಲ್ಲಿದ್ದ ಒಂದು ಕಲ್ಲು ತೆಗೆದು, ಅದನ್ನು ತನ್ನ ಖಡ್ಗದಿಂದ ಚೂರು ಚೂರು ಮಾಡಲುಪಕ್ರಮಿಸಿದನು.

ಪಿಂಗಳನಿಗೆ ಆತನ ವಿಚಿತ್ರಕೆಲಸ ನೋಡಿ ಆಶ್ಚರ್ಯವಾಯಿತು. "ಪದ್ಮಪಾದ, ಇದೇಕೆ? ನೀವು ಮಾಡುತ್ತಿರುವ ಕೆಲಸವೇನು? ಅತ್ತ ಕಳ್ಳರು ವರ್ತಕರನ್ನು ಸುಲಿಗೆಮಾಡಿ ನಿರ್ಭಯದಿಂದ ತಿರುಗಾಡುತ್ತಿದ್ದಾರೆ. ಇತ್ತ ನೀವು... ಅವರನ್ನು ಕೂಡಲೇ ಕೊಲ್ಲುವ ಉಪಾಯ ಮಾಡಿ. ನಿಧಾನ ಮಾಡಬಾರದು" ಎಂದು ಅವಸರ ಪಡಿಸಿದನು. ಪದ್ಮಪಾದನು ಅಲಕ್ಷ್ಯವಾಗಿ ನಗುತ್ತಾ ಒಂದು ಹಿಡಿ ಕಲ್ಲು ಚೂರುಗಳನ್ನು ತೆಗೆದು ಪಿಂಗಳನಮುಂದೆ ಹಿಡಿದು "ಈ ಕತ್ತಲೆಯಲ್ಲಿ ಕಳ್ಳರನ್ನು ಹಿಡಿಯುವುದು ಕಷ್ಟವೆಂದು ನೀನೇ ಹೇಳಿದೆ. ಆದುದರಿಂದ ಕತ್ತಲೆಯಲ್ಲಿ ಓಡಾಡುವ ತೋಳ, ಹುಲಿಗಳನ್ನು ಆ ಕಳ್ಳರಮೇಲೆ ಬಿಡುತ್ತೇನೆ. ಈ ಕೈಯಲ್ಲಿರುವ ದೊಡ್ಡ ಕಲ್ಲುಚೂರುಗಳು ಹುಲಿಗಳು, ಸಣ್ಣಸಣ್ಣ ಚೂರುಗಳು ತೋಳಗಳು" ಎಂದು ಹೇಳಿ, ಕಲ್ಲುಚೂರುಗಳನ್ನು ಮಂತ್ರಿಸಿ, ಬಲವನ್ನೆಲ್ಲಾ ಪ್ರಯೋಗಿಸಿ ಎಲ್ಲ ಕಡೆಗೂ ಎಸೆದನು.

ಕೂಡಲೇ ಆ ಪ್ರದೇಶದಲ್ಲಿ ಭೀಕರವಾಗಿ ಅರಚುವ ತೋಳಗಳು, ಆರ್ಭಟಿಸುವ ಹುಲಿಗಳು, ಕಲ್ಲುಬಂಡೆಗಳಮೇಲಿಂದ ಧುಮುಕುತ್ತಾ ಎಲ್ಲ ದಿಕ್ಕಿಗೂ ಓಡಿದುವು.



ಆ ದೃಶ್ಯವನ್ನು ಕಂಡು ಪಿಂಗಳನು ನಿಶ್ಚೇಷ್ಟಿತನಾದನು. ಅವರು ನೋಡುತ್ತಿದ್ದಂತೆ ಹಸನ್‌ಗೋರಿ, ಗುಹೆಯಲ್ಲಿ ಬಂಧಿತರಾಗಿದ್ದ ವರ್ತಕರ ತಂಡವನ್ನೆಲ್ಲಾ ಬಿಡಿಸಿಕೊಂಡು ಪದ್ಮಪಾದನ ಬಳಿಗೆ ಬಂದನು. ಹಸನ್ ಗೋರಿ ತೇಕುತ್ತಾ ಸುತ್ತಲೂ ಕೈಬೀಸಿ ಅತ್ಯಂತ ವಿಸ್ಮಯದಿಂದ "ಪಿಂಗಳಾ, ಏನಿದು ಸೋಜಿಗ?" ಎಂದು ಬೆರಗುಗಣ್ಣುಗಳಿಂದ ಪಿಂಗಳನನ್ನು ಕೇಳಿದನು.

"ಪದ್ಮಪಾದ, ಇನ್ನು ನಿಮ್ಮ ರಹಸ್ಯವನ್ನು ಬಚ್ಚಿಟ್ಟು ಪ್ರಯೋಜನವಿಲ್ಲ. ನನಗೆ ಅನುಮತಿ ಕೊಡಬೇಕು. ನಿಜ ಹೇಳಿಬಿಡಲೇ?" ಎಂದು ಪಿಂಗಳನು ಕೇಳಿದ.

ಪದ್ಮಪಾದನು ತನ್ನ ಅಂಗೀಕಾರವನ್ನು ಸೂಚಿಸಿ, ತನ್ನ ಅಂಗಿಯ ಕಿಸೆಯಲ್ಲಿದ್ದ ಮಹಾ ಮಾಯನ ಉಂಗುರವನ್ನು ಹೊರಗೆ ತೆಗೆದು ಎತ್ತರವಾಗಿದ್ದ ಒಂದು ಬಂಡೆಯಮೇಲಿಟ್ಟನು. ತಕ್ಷಣ ಆ ಪ್ರದೇಶವೆಲ್ಲಾ ಆ ಜಾಜ್ವಲ್ಯಮಾನ ವಾದ ಉಂಗುರದ ಅದ್ಭುತ ಕಾಂತಿಯಿಂದ ಬೆಳದಿಂಗಳು ಚೆಲ್ಲಿದಂತೆ ಬೆಳಗಿತು.

ಪಿಂಗಳನು ಒಂದೆರಡು ಮಾತುಗಳಲ್ಲಿ ಪದ್ಮ ಪಾದನ ಪರಿಚಯವನ್ನು ಎಲ್ಲರಿಗೂ ಮಾಡಿ ಕೊಟ್ಟನು. ನಂತರ ಹಸನ್‌ಗೋರಿಯೊಂದಿಗೆ "ಹಸನ್, ಮರುಭೂಮಿಯ ಕಳ್ಳರನ್ನು ಕುರಿತು ನೀವು ಇನ್ನು ಚಿಂತಿಸಬೇಡಿ. ಮಂತ್ರ ಪ್ರವರನಾದ ಪದ್ಮಪಾದನು ಅಟ್ಟಿದ ತೋಳ ಮತ್ತು ಹುಲಿಗಳು ಅವರೆಲ್ಲರನ್ನೂ ಇಲ್ಲಿಗೆ ಈಗಲೇ ಅಟ್ಟಿಕೊಂಡು ಬರುತ್ತವೆ. ನೋಡು ತ್ತಿರಿ!" ಎಂದನು.

ಪಿಂಗಳನು ಮಾತು ಮುಗಿಸುವಷ್ಟರಲ್ಲಿ ಆ ಬೆಟ್ಟಪ್ರದೇಶದಲ್ಲಿ ಹಾಹಾಕಾರ ಕೇಳಿ ಸಿತು. ತೋಳಗಳ ಕೂಗಾಟ, ಹುಲಿಗಳ ಆರ್ಭಾಟ ಕೇಳಿಸಿತು. ಅದರೊಂದಿಗೆ ಮನುಷ್ಯರ ದೀನಧ್ವನಿಗಳೂ ಕೇಳಿಸಿದುವು.

ನೋಡನೋಡುತ್ತಿದ್ದಹಾಗೆಯೇ ಎಲ್ಲಕಡೆ ಯಿಂದ ಸುತ್ತುವರಿದ ಕ್ರೂರಮೃಗಗಳ ದವಡೆ ಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿ, ವಿಫಲ ರಾಗಿ ಪದ್ಮಪಾದ ಪಿಂಗಳರಿದ್ದ ಸ್ಥಳಕ್ಕೆ ನೂರಾರು ಜನ ಕಳ್ಳರು ಭೀತಿಯಿಂದ ಅರ ಚುತ್ತಾ ಬರುತ್ತಿದ್ದರು. [ಇನ್ನೂ ಇದೆ]






# ಅಲೀನೂರ್

[ ಕಳೆದ ಸಂಚಿಕೆಯಿಂದ ಮುಂದುವರಿದುದು ]

**ಸು**ಲ್ತಾನನು ವಜೀರನನ್ನು ನೋಡಿ "ನಿನ್ನನ್ನು ಹೀಗೆ ಮಾಡಿದವರು ಯಾರು?" ಎಂದು ಆಶ್ಚರ್ಯದಿಂದ ಕೇಳಿದನು.

"ಮಹಾಪ್ರಭು, ಅಡಿಗೆಯವಳೊಬ್ಬಳನ್ನು ಕೊಳ್ಳಲು ಪೇಟೆಯಕಡೆ ಹೋದೆ. ಅಲ್ಲಿ ಸುಂದರಳಾದ ಗುಲಾಮಳೊಬ್ಬಳನ್ನು ನಮ್ಮ ಆಲ್‌ಫದಲ್‌ನ ಮಗನಾದ ಅಲೀನೂರ್ ಮಾರುತ್ತಿರುವುದಾಗಿ ತಿಳಿಯಿತು. ತಾವು ಹಿಂದೊಮ್ಮೆ ಹತ್ತುಸಾವಿರ ದೀನಾರಗಳನ್ನಾದರೂ ಕೊಟ್ಟು ಸುಂದರಿಯಾದ ಗುಲಾಮಳನ್ನು ತರುವಂತೆ ಆಲ್‌ಫದಲ್‌ಗೆ ಹೇಳಿದ್ದಿರಿ. ಇವಳೇ ಆ ಗುಲಾಮಳಂತೆ; ಆಲ್‌ಫದಲ್ ಅವಳನ್ನು ನಿಮಗೆ ಸಮರ್ಪಿಸದೆ, ತನ್ನ ಮಗನಿಗೆ ಉಡುಗೊರೆಯಾಗಿ ಕೊಟ್ಟನು. ಅಲೀನೂರ್ ಹಣವನ್ನು ಸಿಕ್ಕಾಪಟ್ಟೆ ಪೋಲುಮಾಡಿ ಈಗ ಭಿಕಾರಿಯಾಗಿದ್ದಾನೆ. ಅಂತಲೇ ಈ ಗುಲಾಮಳನ್ನು ಮಾರುತ್ತಿದ್ದನು. ಸರಕು ಕೇವಲ ನಾಲ್ಕುಸಾವಿರ ದೀನಾರಗಳಿಗೆ ಹೋಗುತ್ತಿದ್ದುದರಿಂದ, ಅವಳನ್ನು ಕೊಂಡು ತಂದು ನಿಮಗೆ ಒಪ್ಪಿಸಲು ನಿರ್ಧರಿಸಿ, ಬೆಲೆ ಮಾಡಿದೆ. ಆಗ ಆ ಉದ್ಧಟನು ನನ್ನಬಳಿಗೆ ಬಂದು "ಯಹೂದಿಗಳಿಗೆ ಮಾರುವೆನೇ ಹೊರತು ನಿನಗೆ ಮಾರುವುದಿಲ್ಲ, ನಡಿ" ಎಂದು ಗುಡುಗಿದ. ನಾನು ವಿನಯದಿಂದ "ಇವಳನ್ನು ನನ್ನ ಸ್ವಂತಕ್ಕಾಗಿ ತೆಗೆದು ಕೊಳ್ಳುತ್ತಿಲ್ಲ. ಸುಲ್ತಾನರಿಗೆ ಕಾಣಿಕೆಯಾಗಿ ಅರ್ಪಿಸಲು ಬೆಲೆ ಮಾಡುತ್ತಿರುವೆನು," ಎಂದ. ಆಗ ಅಲೀನೂರ್ ಮತ್ತಷ್ಟು ರೋಷದಿಂದ ನನ್ನನ್ನು ಕುದುರೆಯಿಂದ ಕೆಳಗೆಳೆದು, ಎಲ್ಲರೆದುರಿಗೆ ಕಾಲಿನಿಂದ ಒದ್ದನು. ಎಷ್ಟು ಅಹಂಕಾರ ಆ ಪೋರನಿಗೆ!" ಎಂದು ಹೇಳಿದನು ವಜೀರ.

ಸುಲ್ತಾನನೂ ರೊಚ್ಚಿಗೆದ್ದು ತನ್ನ ಭಟರನ್ನು ಕರೆದು "ನಲವತ್ತು ಜನರು ಕೂಡಲೇ ಹೋಗಿ ಅಲೀನೂರ್‌ನ ಮನೆಯನ್ನು ಧ್ವಂಸ ಮಾಡಿ, ಅವನನ್ನೂ ಅವನ ದಾಸಿಯನ್ನೂ

ಎಸ್. ಪಿ. ಕುಮಾರಿ



ಹೆಡೆಮುರಿಕಟ್ಟಿ ಎಳೆದುಕೊಂಡು ಬನ್ನಿ" ಎಂದು ಕಠಿನವಾಗಿ ಆಜ್ಞಾಪಿಸಿದನು.

ಅದೃಷ್ಟವಶಾತ್ ಅಲ್ಲಿದ್ದ ಭಟರಲ್ಲಿ ಒಬ್ಬನು ಒಂದಾನೊಂದು ಕಾಲದಲ್ಲಿ ಅಲ್‌ಫದಲ್‌ನ ಬಳಿ ಕೆಲಸ ಮಾಡುತ್ತಿದ್ದನು. ಅವನೂ, ಅಲೀನೂರ್ ಸಮವಯಸ್ಕರು. ಇಬ್ಬರೂ ಒಟ್ಟಿಗೆ ಬೆಳೆದವರು. ಆದುದರಿಂದ ಆ ಭಟನು ತಕ್ಷಣ ಮೆಲ್ಲನೆ ಹೊರಗೆಬಂದು, ಅಡ್ಡದಾರಿಯಿಂದ ಅಲೀನೂರನ ಮನೆಗೆ ಹೋಗಿ "ಸ್ವಾಮಿ, ತಾವು ಕೂಡಲೇ ಮನೆಬಿಟ್ಟು ಪರಾರಿಯಾಗಬೇಕು. ತಡಮಾಡಿದರೆ ಮಾನ ಪ್ರಾಣಗಳು ಉಳಿಯಲಾರವು" ಎಂದು ನಡೆದ ವಿಷಯವನ್ನು ತಿಳಿಸಿದನು. ತಡಮಾಡದೆ ಅಲೀನೂರ್ ಪ್ರಿಯಸಖಿಯನ್ನು ಪ್ರಯಾಣಕ್ಕೆ ಸಿದ್ಧಪಡಿಸಿದನು. ರಾಜಭಟನು ಅಲೀನೂರ್ ಕೈಗೆ ನಲವತ್ತು ದೀನಾರಗಳನ್ನು ಕೊಟ್ಟು "ಅಪ್ಪಾ, ಸದ್ಯ ನನ್ನಬಳಿ ಇದಕ್ಕಿಂತಲೂ ಹೆಚ್ಚು ಹಣವಿಲ್ಲ. ಇದನ್ನು ಸ್ವೀಕರಿಸು. ಇದರಿಂದ ನಿಮ್ಮ ಪ್ರಾಣಗಳನ್ನು ಉಳಿಸಿಕೊಳ್ಳಿ" ಎಂದನು ಕಂಪಿತ ಸ್ವರದಿಂದ.

ಅಲೀನೂರ್ ಮತ್ತು ಪ್ರಿಯಸಖಿಯರು ಹಿತ್ತಲ ಬಾಗಿಲಿಂದ ಹೊರಟು, ಸಂದುಗೊಂದುಗಳಲ್ಲಿ ನಡೆದು ಸಮುದ್ರತೀರವನ್ನು ಸೇರಿಕೊಂಡರು. ಅದೃಷ್ಟವಶಾತ್ ಒಂದು ಹಡಗು ಬಾಗದಾದ್‌ನಗರಕ್ಕೆ ಹೊರಡಲು ಸಿದ್ಧವಾಗಿತ್ತು. "ಪ್ರಯಾಣಿಕರೆಲ್ಲ ಬರಬೇಕು, ಸಮಯವಾಯಿತು" ಎಂದು ಸರಂಗ್ ಕೂಗಿದನು. ಸಂದೇಹಿಸದೆ ಅವರಿಬ್ಬರೂ ಹಡಗನ್ನೇರಿಬಿಟ್ಟರು. ಲಂಗರು ಎತ್ತಿದ ಕೂಡಲೇ ಹಡಗು ಬಾಗದಾದಿಗೆ ಹೊರಟಿತು.

ಅಲೀನೂರ್ ಮನೆ ಬಿಟ್ಟನಂತರ ಸುಲ್ತಾನನ ಭಟರು ಅವನ ಮನೆಯಮೇಲೆ ಧಾಳಿ ಮಾಡಿ, ಎಲ್ಲವನ್ನೂ ಧ್ವಂಸಗೊಳಿಸಿದರು. ಕ್ಷಣಮಾತ್ರದಲ್ಲಿ ಮನೆ ನೆಲಸಮವಾಯಿತು.

ಸುಲ್ತಾನನು ಕೆರಳಿ ಅಲೀನೂರ್‌ಗಾಗಿ ಬಸ್ರಾನಗರದಲ್ಲೆಲ್ಲಾ ಹುಡುಕಿಸಿದನು. ಆತನು ವಜೀರ್ ಸಾವಿಯೊಂದಿಗೆ "ವಜೀರ್, ನೀನು ಚಿಂತಿಸದಿರು. ಅವರು ಎಲ್ಲಿದ್ದರೂ ಹುಡುಕಿಸಿ ನಿನಗಾದ ಅಪಮಾನಕ್ಕೆ, ತಕ್ಕ ಶಾಸ್ತಿಮಾಡುವೆನು" ಎಂದು ಭರವಸೆ ಕೊಟ್ಟನು. ವಜೀರ್‌ಸಾವಿ ಸುಲ್ತಾನರಿಗೆ ಪುತ್ರ

ಪೌತ್ರಾದಿ ವೃದ್ಧಿಯಾಗಲೆಂದು ಆಶೀರ್ವದಿಸಿದನು. ಅಲೀನೂರನಿಗೆ ಆಶ್ರಯಕೊಟ್ಟವರಿಗೆ ಶಿರಚ್ಛೇದ ಮಾಡುವುದಾಗಿಯೂ, ಅವನನ್ನು ಹಿಡಿದುಕೊಟ್ಟವರಿಗೆ ಸಾವಿರ ದೀನಾರಗಳನ್ನು ಬಹುಮಾನವಾಗಿ ಕೊಡುವುದಾಗಿಯೂ ನಗರದಲೆಲ್ಲಾ ಡಂಗುರ ಹೊಯಿಸಿದರು. ಆದರೆ ಎಲ್ಲ ಪ್ರಯತ್ನಗಳು ವಿಫಲವಾದುವು. ಅಲೀನೂರನ ಸುಳಿವು ಸಿಕ್ಕಲೇ ಇಲ್ಲ.

ಅಲೀನೂರ್ ಹತ್ತಿದಹಡಗು ಬಾಗದಾದ್ ನಗರವನ್ನು ತಲುಪಿತು. ಹಡಗಿನ ಸರಂಗ್ ಅಲೀನೂರನೊಂದಿಗೆ "ಅಯ್ಯಾ, ಇದುವೇ ಬಾಗದಾದ್ ಮಹಾನಗರ, ಭೂಲೋಕ ಸ್ವರ್ಗ. ಎಲ್ಲರೂ ಇಲ್ಲಿಯೇ ಇಳಿದುಬಿಡಬೇಕು" ಎಂದನು.

ಪ್ರಯಾಣದ ವೆಚ್ಚ ಐದು ದೀನಾರಗಳನ್ನು ಹಡಗಿನ ಸರಂಗಿಗೆ ಕೊಟ್ಟು, ಅಲೀನೂರ್ ಪ್ರಿಯಸಖಿಯೊಂದಿಗೆ ಹಡಗಿನಿಂದ ಇಳಿದನು. ದೈವವಶಾತ್ ಅವರು ಬಾಗದಾದ್ ನಗರಕ್ಕೆ ರಾಜಬೀದಿಯಲ್ಲಿ ಹೋಗದೆ ಅಡ್ಡದಾರಿ ಹಿಡಿದರು. ಆ ದಾರಿ ಅವರನ್ನು ಬಾಗದಾದ್ ನಗರದ ಹೊರಗಿದ್ದ ಉದ್ಯಾನದ ಮಧ್ಯಭಾಗಕ್ಕೆ ಕೊಂಡೊಯ್ದಿತು. ಅವರು ಆ ಉದ್ಯಾನವನ್ನು ಪ್ರವೇಶಿಸಿದರು.

ಅದು ಖಲೀಫಾರವರ ಉದ್ಯಾನ. ಅದರ ಸುತ್ತಲೂ ಎತ್ತರವಾದ ಪ್ರಾಕಾರವಿತ್ತು. ಮುಖದ್ವಾರದಮೇಲೆ ಬಣ್ಣಬಣ್ಣದ ದೀಪಗಳಿದ್ದುವು. ದ್ವಾರದಹೊರಗೆ ಕುಳಿತುಕೊಳ್ಳಲು



ಆಸನಗಳಿದ್ದುವು. ದ್ವಾರದ ಬಾಗಿಲು ಮುಚ್ಚಿದ್ದಿತು. ಬಾಗಿಲ ಪಕ್ಕದಲ್ಲೇ ಜಲಯಂತ್ರವಿತ್ತು. "ಆಹಾ, ಈ ಸ್ಥಳ ರಮಣೀಯವಾಗಿದೆ. ಕೊಂಚಹೊತ್ತು ಇಲ್ಲಿ ಕುಳಿತು ಸುಧಾರಿಸಿಕೊಳ್ಳೋಣ" ಎಂದ ಅಲೀನೂರ್ ಪ್ರಿಯಸಖಿಯೊಂದಿಗೆ. ಅವರಿಬ್ಬರೂ ಜಲಯಂತ್ರದಬಳಿಗೆ ಹೋಗಿ, ಮುಖಮಾರ್ಜನ ಮಾಡಿಕೊಂಡು ಜಗಲಿಯಮೇಲೆ ಹಾಗೇ ಮಲಗಿಕೊಂಡರು. ತಂಗಾಳಿ ಅವರಿಗೆ ಜೋಗುಳ ಪಾಡಿತು. ಅವರು ಬಟ್ಟೆಯನ್ನು ಮುಖದಮೇಲೆ ಹಾಕಿಕೊಂಡು ನಿದ್ರೆಹೋದರು. ಅವರಿಬ್ಬರೂ ತಲುಪಿದ್ದ ಉದ್ಯಾನವನದ ಹೆಸರು ಆನಂದೋದ್ಯಾನ. ಅದರಮಧ್ಯೆ ಒಂದು ಮಹಲು ಇತ್ತು. ಆ ಮಹಲಿನ ಹೆಸರು ಚಿತ್ರಮಹಲು. ಖಲೀಫ

ನಿಗೆ ಬೇಸರವಾದಾಗ ಇಲ್ಲಿಗೆ ಬರುವುದುಂಟು. ಉದ್ಯಾನದ ನಡುವೆಯಿದ್ದ ಮಹಲೆಲ್ಲಾ ಒಂದು ಬಾರಿ ಕೊಟಡಿ. ಆ ಪಡಸಾಲಿಗೆ ನಲವತ್ತೈದು ಕಿಟಕಿಗಳಿದ್ದುವು. ಒಂದೊಂದು ಕಿಟಕಿಯಲ್ಲೂ ಒಂದೊಂದು ದೀಪ ನೇತಾಡುತಿತ್ತು. ಪಡ ಸಾಲೆಯ ಮಧ್ಯೆ ಚಿನ್ನದ ದೀಪವೊಂದು ಕಂಗೊಳಿಸುತಿತ್ತು. ಖಲೀಫರು ಬಂದಾಗ ಮಾತ್ರ ಈ ಮಹಲ ಬಾಗಿಲನ್ನು ತೆರೆಯು ವರು. ಆಗ ಕಿಟಕಿಗಳನ್ನೆಲ್ಲಾ ತೆರೆದು, ದೀಪ ಗಳನ್ನು ಅಂಟಿಸುವರು. ಮಹಲಿನ ನಡುವೆ ಒಂದು ಪೀಠವನ್ನು ಹಾಕುವರು. ಅದರಲ್ಲಿ ಸುಖಾಸೀನನಾಗಿ ಕುಳಿತು ಖಲೀಫನು ಸಂಗೀತ ನೃತ್ಯಗಳನ್ನು ನೋಡಿ ಆನಂದಹೊಂದುವನು. ಖಲೀಫನ ಆಸ್ಥಾನ ಗಾಯಕನಾದ ಇಸಾಕ್ ತನ್ನ ಅದ್ಭುತ ಸಂಗೀತದಿಂದ ಆತನ ಚಿಂತೆ ದೂರಮಾಡಿ ಸಂತೋಷಗೊಳಿಸುವುದುಂಟು.

ಇದನ್ನೆಲ್ಲಾ ಕಾಯಲು ಖಲೀಫನು ಇಬ್ರಾಹಿಂ ಎಂಬ ವೃದ್ಧನನ್ನು ನೇಮಿಸಿದ್ದನು. ಹಾದಿಗರು ತೋಟದಲ್ಲಿ ತಮ್ಮಿಷ್ಟಬಂದಂತೆ ಕುಣಿದು ಕುಪ್ಪಳಿಸಿ, ಅಲ್ಲಿರುವ ಫಲಪುಷ್ಪ ಗಳನ್ನು ಹಾಳುಮಾಡದಂತೆ ಇಬ್ರಾಹಿಂ ನೋಡಿ ಕೊಳ್ಳುತ್ತಿದ್ದನು.

ಅಂದು ಸಾಯಂಕಾಲ ಅವನು ತನ್ನ ಪದ್ಧತಿಯಪ್ರಕಾರ ತೋಟದಲ್ಲೆಲ್ಲಾ ಸಂಚರಿ ಸುತ್ತಾ ಮುಖದ್ವಾರದಬಳಿಗೆ ಬಂದನು. ಅಲ್ಲಿ ಮಲಗಿರುವವರನ್ನು ಕಂಡನು.

"ಏನಿವರಸಾಹಸ? ಖಲೀಫರು ನನ್ನನ್ನು ಇಲ್ಲಿ ಇಟ್ಟಿರುವುದೇಕೆ! ಖಲೀಫರ ಪರಿವಾರದ



ಉಪಯೋಗಕ್ಕೆಂದು ಮೀಸಲಾಗಿರುವ ಆಸನಗಳಮೇಲೆ ಭಯಭೀತಿಗಳಿಲ್ಲದೆ ಮಲಗಿದ್ದಾರೆ!" ಎಂದು ಕೋಲು ತೆಗೆದುಕೊಂಡು ಅಲ್ಲಿಗೆ ಬಂದನು. ಆದರೆ ಅವನ ಅಂತರಾತ್ಮ ಹೀಗೆಂದಿತು : "ಏನುಹುಚ್ಚು ಕೆಲಸಮಾಡುತ್ತಿರುವೆ ಇಬ್ರಾಹಿಂ? ಅವರುಯಾರೋ ನಿನಗೆ ತಿಳಿದಿದೆಯೆ? ಅಲ್ಲಾ ಕಳುಹಿಸಿದ ಅತಿಥಿಗಳಾಗಿರಬಾರದೇಕೆ? ದಿಕ್ಕಿಲ್ಲದ ಭಿಕಾರಿಗಳಾಗಿರಬಹುದು" ಇಬ್ರಾಹಿಂ ಬಹಳ ದೈವಭಕ್ತಿಯುಳ್ಳವನು. ಆದುದರಿಂದ ಅವನು ಅಪರಾಧಿಗಳನ್ನು ದಂಡಿಸುವ ಯೋಚನೆಯನ್ನುಬಿಟ್ಟು, ಮಲಗಿದ್ದವರ ಮುಖದಮೇಲಿನ ಮುಸುಕನ್ನು ಸರಿಸಿನೋಡಿ, ಅವರ ಅಂದಚಂದಗಳಿಗೆ ಬೆರಗಾದನು. ಅವನ ಕೋಪ ಪಶ್ಚಾತ್ತಾಪವಾಗಿ ಪರಿಣಮಿಸಿತು. ಅವನು ಅಲೀನೂರನ ಬಳಿ ಕುಳಿತು ಕಾಲು ಒತ್ತಲಾರಂಭಿಸಿದನು. ಸ್ಪರ್ಶವಾದಕೂಡಲೇ ಅಲೀನೂರ್ ತಟಾಲನೆ ಎದ್ದು ಕುಳಿತನು. ತನ್ನ ಕಾಲು ಒತ್ತುತ್ತಿದ್ದಾತನು ವೃದ್ಧನೆಂದು ತಿಳಿದಕೂಡಲೇ ಅವನು ಇಬ್ರಾಹಿಮನ ಕೈಹಿಡಿದು ತನ್ನ ಕಣ್ಣಿಗೆ ಒತ್ತಿಕೊಂಡನು. "ನೀವಿಬ್ಬರೂ ಎಲ್ಲಿಂದ ಬರುತ್ತಿರುವಿರಿ, ಮಗು" ಎಂದು ಕೇಳಿದ ತೋಟಮಾಲಿ.

"ಪರದೇಶಿಗಳು ನಾವು" ಎಂದು ಹೇಳಿದ ಅಲೀನೂರ್.

"ಅತಿಥಿಗಳನ್ನು ಆದರಿಸಬೇಕೆಂದು ಅಲ್ಲಾನ ಅಪ್ಪಣೆ. ನನ್ನ ತೋಟ ಮತ್ತು ಮಹಲುಗಳನ್ನು ನೋಡುವಿರಂತೆ ಬನ್ನಿ" ಎಂದು ಇಬ್ರಾಹಿಂ ಅವರಿಗೆ ಆಹ್ವಾನವಿತ್ತನು.






"ಇದೆಲ್ಲಾ ತಮ್ಮಸೊತ್ತೇ?" ಅಲೀನೂರ್ ಆಶ್ಚರ್ಯದಿಂದ ಕೇಳಿದ.

ಖಲೀಫರ ಹೆಸರು ಹೇಳಿದರೆ ಆತರುಣನು ಎಲ್ಲಿ ಹೆದರಿಬಿಡುವನೋ ಎಂದು ಇಬ್ರಾಹಿಂ "ಹೌದು, ತಮ್ಮಾ, ಇದೆಲ್ಲಾ ನನ್ನದೇ. ನೋಡು" ಎಂದನು.

ಆವೇಳೆಗೆ ಪ್ರಿಯಸಖಿ ಸಹ ನಿದ್ರೆಯಿಂದ ಎಚ್ಚೆತ್ತಳು. ಇಬ್ಬರೂ ಮಾಲಿಯ ಸಂಗಡ ಒಳಗೆ ಹೋದರು. ಅಲೀನೂರ್ ಬಸ್ರಾನಗರ ದಲ್ಲಿ ತುಂಬಾ ರಮ್ಯವಾದ ಉದ್ಯಾನಗಳನ್ನು ಕಂಡಿದ್ದನು. ಆದರೆ ಇಷ್ಟೊಂದು ಸುಂದರವಾದ ಉದ್ಯಾನವನವನ್ನು ಅವನು ಕನಸಿನಲ್ಲೂ ಕಂಡಿರಲಿಲ್ಲ. ದಾರಿಯುದ್ದಕ್ಕೂ ಕೆತ್ತನೆಯ ಕೆಲಸಮಾಡಿದ್ದ ಕಮಾನುಗಳಿದ್ದುವು. ಅವುಗಳ ಮೇಲೆ ದ್ರಾಕ್ಷೆಯಬಳ್ಳಿಗಳು ಹಬ್ಬಿ, ಅಲ್ಲಲ್ಲಿ ಕೆಂಪು ಮತ್ತು ಕಪ್ಪು ಬಣ್ಣದ ದ್ರಾಕ್ಷಿಗೊಂಚಲು ನೇತಾಡುತ್ತಿದ್ದುವು. ವಿವಿಧ ಪಕ್ಷಿಗಳು ಮಂಜುಳ ಗಾನ ಮಾಡುತ್ತಿದ್ದುವು. ಆ ತೋಟದಲ್ಲಿದ್ದ ಹೂಗಿಡಗಳವಿಷಯ ಹೇಳುವಂತೆಯೇ ಇಲ್ಲ. ಅಲ್ಲಿ ಎಲ್ಲತರಹದ ಪುಷ್ಪಗಳಿದ್ದುವು.

ಇಬ್ರಾಹಿಂ ತನ್ನ ಅತಿಥಿಗಳಿಗೆ ತೋಟ ವನ್ನು ತೋರಿಸಿ ಅವರನ್ನು ಮಹಲಿನೊಳಕ್ಕೆ ಕರೆದುಕೊಂಡು ಹೋದನು. ಒಳಗೆ ಹೆಜ್ಜೆ ಯಿಟ್ಟಕೂಡಲೇ ಅವರಿಬ್ಬರ ಕಣ್ಣುಗಳು ಕೋರೈಸಿದುವು. ಪ್ರಪಂಚದಲ್ಲಿ ಅಷ್ಟು ಅಂದ ವಾಗಿ ಅಳವಡಿಸಿರುವ ಮಹಲು ಬೇರೊಂದು ಇರಲಾರದೆಂದು ಅವರಿಗೆ ತೋರಿತು. ಅದನ್ನೆಲ್ಲಾ ಸೂಕ್ಷ್ಮವಾಗಿ ಪರಿಶೀಲಿಸಲು ಸಾಕಷ್ಟು ಹೊತ್ತಾಯಿತು. ಅಲೀನೂರ್ ಒಂದು ಕಿಟಕಿಯಹತ್ತಿರ ಹೋಗಿ ಹೊರಗಿನ ತೋಟವನ್ನು ನೋಡಿದನು. ಹೊರಗಡೆ ಬೆಳ ದಿಂಗಳು ಚೆಲ್ಲಿತ್ತು. ಅವನು ತುಂಬಾ ಬೆಳ ದಿಂಗಳನ್ನು ನೋಡುತ್ತಾ ತನ್ನ ಕಷ್ಟಗಳನ್ನು ಆಕ್ಷಣ ಮರೆತುಬಿಟ್ಟನು. ಇಬ್ರಾಹಿಂ ಒಳಗೆ ಹೋಗಿ ಆಹಾರವನ್ನು ತಂದು ಅವರಮುಂ ದಿಟ್ಟನು. ಅಲೀನೂರ್ ಅವನೊಂದಿಗೆ "ಇಬ್ರಾಹಿಂ, ಆಹಾರದೊಂದಿಗೆ ಪಾನೀಯ ಗಳನ್ನು ಕೊಡುವುದು ಪದ್ಧತಿಯಲ್ಲವೇ? ಇಲ್ಲಿ ಯಾವ ಪಾನೀಯವೂ ಕಾಣಿಸುತ್ತಿಲ್ಲವಲ್ಲಾ" ಎಂದು ಕೇಳಿದನು. ಇಬ್ರಾಹಿಂ ಒಂದು ಲೋಟ ಸಿಹಿನೀರು ತಂದನು. ಅಲೀನೂರ್ ಅದನ್ನು

ನೋಡಿ ನಗುತ್ತಾ "ನಾನು ಕೇಳಿದ ಪಾನೀಯ ಇದಲ್ಲ," ಎಂದು ತಲೆಯನ್ನಾಡಿಸಿದನು.

" ನಿನಗೆ ದ್ರಾಕ್ಷಾರಸ ಬೇಕೆಂದು ತೋರುವುದು. ನಾನು ಹದಿಮೂರು ವರ್ಷಗಳಕೆಳಗೆ ಮಕ್ಕಾಕ್ಕೆ ಹೋಗಿ ಅಲ್ಲಿ ಮದ್ಯಪಾನಮಾಡುವುದನ್ನು ಬಿಟ್ಟುಬಿಟ್ಟೆ. ನಿನಗೆ ಬೇಕಾದರೆ ಒಂದಿಷ್ಟು ತಂದುಕೊಡುತ್ತೇನೆ" ಎಂದು ಹೇಳಿ ಇಬ್ರಾಹಿಂ ಮದ್ಯತಂದು ಅವರಮುಂದಿಟ್ಟನು. ಅವರಿಬ್ಬರೂ ಕುಡಿಯುತ್ತಿರುವುದನ್ನು ಕಂಡು ಅವನಿಗೂ ಕುಡಿಯಬೇಕೆನಿಸಿತು. ಒಂದು ಬಟ್ಟಲಿನಲ್ಲಿ ಸಾರಾಯಿ ಹಾಕಿಕೊಂಡು ತಾನೂ ಕುಡಿಯಲಾರಂಭಿಸಿದನು.

" ದೀಪಗಳಿಲ್ಲದಿದ್ದರೆ ಸೊಗಸು ಕಾಣಿಸದು. ಇಬ್ರಾಹಿಂ, ದೀಪಗಳನ್ನು ಹೊತ್ತಿಸಲೇ" ಎಂದಳು ಪ್ರಿಯಸಖಿ. ಕುಡಿತದ ಅಮಲಿನಲ್ಲಿದ್ದ ಇಬ್ರಾಹಿಂ ಒಂದೇ ಒಂದು ದೀಪವನ್ನು ಹೊತ್ತಿಸಲು ಅನುಮತಿ ಕೊಟ್ಟನು. ಆದರೆ ಅಲೀನೂರ್ ಮಹಲಿನಲ್ಲಿದ್ದ ಕಿಟಕಿಗಳನ್ನೆಲ್ಲಾ ತೆರೆದು ದೀಪಗಳನ್ನು ಹೊತ್ತಿಸಿಬಿಟ್ಟನು.

ಸರಿಯಾಗಿ ಅದೇಸಮಯಕ್ಕೆ ಖಲೀಫನು ತನ್ನ ಭವನದ ಕಿಟಕಿಯಬಳಿ ನಿಂತಿದ್ದನು. ಆತನಿಗೆ ಆನಂದೋದ್ಯಾನದಲ್ಲಿದ್ದ ಮಹಲು ದೇದೀಪ್ಯಮಾನವಾಗಿ ಬೆಳಗುತ್ತಿರುವುದು ಕಾಣಿಸಿತು. ಅವನು ಕೂಡಲೇ ತನ್ನ ವಜೀರ ಜಾಫರನನ್ನು ಕರೆದು "ಅಸಮರ್ಥನೇ, ಈ ನಗರದಲ್ಲಿ ಏನು ನಡೆಯುತ್ತಿರುವುದೆಂದು ನಿನಗೆ ತಿಳಿದಿದೆಯೆ? ಶತ್ರುಗಳು ಬಾಗದಾದನ್ನು ಕೊಳ್ಳೆ ಹೊಡೆದುಕೊಂಡು ಹೋದರೂ ನಿನಗೆ ತಿಳಿಯು



ವಂತಿಲ್ಲ. ನೋಡು, ಚಿತ್ರಮಹಲಿನಲ್ಲಿ ಉರಿಯುತ್ತಿರುವ ದೀಪಗಳನ್ನು! ನಾನು ಖಲೀಫನಾಗಿರಲು ಇದು ಹೇಗೆ ನಡೆಯಿತು?" ಎಂದು ಕೋಪದಿಂದ ಕೇಳಿದನು.

ವಜೀರ್ ಜಾಫರ್ ಶೋಭಾಯಮಾನವಾಗಿ ಬೆಳಗುತ್ತಿದ್ದ ಚಿತ್ರಮಹಲನ್ನು ಕಂಡು ಚಕಿತನಾದ. ಆದರೆ ಆಗಿನ ಪರಿಸ್ಥಿತಿಯಲ್ಲಿ ಯಾವುದೋ ಒಂದು ಸಮಾಧಾನ ಹೇಳಿ ಖಲೀಫನನ್ನು ಶಾಂತಿಗೊಳಿಸಬೇಕು. "ಹುಜೂರ್, ಹೋದವಾರ ತೋಟಮಾಲಿ ನನ್ನಬಳಿಗೆ ಬಂದು ತನ್ನ ಮೊಮ್ಮಗನ ಮುಂಜಿಯನ್ನು ಚಿತ್ರಮಹಲಿನಲ್ಲಿ ಮಾಡಿಕೊಳ್ಳಲು ಅನುಮತಿ ಕೇಳಿದ. ತಮ್ಮಬಳಿನಂತರ ಅನುಮತಿ ಪಡೆಯೋಣವೆಂದು ನಾನು ಒಪ್ಪಿಕೊಂಡೆ. ತಮ್ಮೊಂದಿಗೆ ಅರಿಕೆ ಮಾಡಿಕೊಳ್ಳಲು ಮರೆತುಬಿಟ್ಟೆ ಕ್ಷಮಿಸಬೇಕು" ಎಂದ ಜಾಫರ್.

"ಅದು ಎರಡನೇ ತಪ್ಪು. ನಾವು ಯಾವುದಾದರೂ ಉಡುಗೊರೆಯನ್ನು ಕೊಡುವೆವೆಂಬ ಆಶೆಯಿಂದ ಆ ಮುದುಕ ಇಬ್ರಾಹಿಂ ತನ್ನ ಮೊಮ್ಮಗನ ಮುಂಜಿಯನ್ನುಕುರಿತು ಪ್ರಸ್ತಾಪ ಮಾಡಿರಬಹುದು. ಈ ಅವಕಾಶವನ್ನೂ ತಪ್ಪಿಸಿಬಿಟ್ಟೆ" ಎಂದ ಖಲೀಫ. "ಮಹಾಸ್ವಾಮಿಯವರು ನನ್ನ ತಪ್ಪನ್ನು ಮನ್ನಿಸಬೇಕು" ಎಂದ ಜಾಫರ್ ವಿನಯದಿಂದ.

"ಹುಂ, ಕ್ಷಮಿಸಿದ್ದೇನೆ. ಆದರೆ ನಾವು ಈ ರಾತ್ರಿ ಇಬ್ರಾಹಿಂ ಸಂಗಡ ಕಳೆಯಲು ನಿಶ್ಚಯಿಸಿದ್ದೇನೆ. ಅವನು ತುಂಬಾ ಯೋಗ್ಯ. ದೈವಭಕ್ತ. ಈಗ ಅವನು ತತ್ವಜ್ಞಾನಿಗಳನ್ನೆಲ್ಲಾ ಕೂರಿಸಿಕೊಂಡು ಪುಣ್ಯಕಥೆಗಳನ್ನು ಕೇಳುತ್ತಿರಬಹುದು. ನಾವು ಈಗ ಹೋದರೆ ಮುದುಕನು ತುಂಬಾ ಸಂತೋಷಪಡುತ್ತಾನೆ" ಎಂದ ಖಲೀಫ.

ಜಾಫರ್‌ನ ಎದೆ ತಲ್ಲಣಿಸಿತು. ಈಗಾಗಲೇ ಬಹಳ ಸಮಯವಾಯಿತೆಂದೂ, ಮುಂಜಿ ಕಾರ್ಯ ಮುಗಿದು, ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೊರಟಿರಬಹುದೆಂದೂ ಖಲೀಫನೊಂದಿಗೆ ಹೇಳಿದನು. ಆದರೆ ಖಲೀಫ ಹಠ ಹಿಡಿದನು. ಖಲೀಫ ಜಾಫರ್ ಮತ್ತು ದಂಡನಾಯಕ ಮಸ್ರು ವ್ಯಾಪಾರಸ್ಥರ ವೇಷಧರಿಸಿ ಚಿತ್ರಮಹಲಿನಕಡೆ ಹೊರಟರು. [ಇನ್ನೂ ಇದೆ]






# 8

[ದೀಪದಭೂತದ ಸಹಾಯದಿಂದ ಅಲ್ಲಾದೀನ್ ತನ್ನ ಬಡತನವನ್ನು ನೀಗಿಸಿಕೊಂಡು, ರಾಜಕುಮಾರಿಯನ್ನು ವಿವಾಹವಾಗಿ, ರಾಜಭವನದೆದುರಾಗಿ ಅದ್ಭುತ ಭವನವನ್ನು ನಿರ್ಮಿಸಿಕೊಂಡು ಅಲ್ಲಿ ಸುಖವಾಗಿ ಜೀವಿಸುತ್ತಿದ್ದನು. ಬಡವರಿಗೆ ಸಹಾಯಮಾಡುತ್ತ, ಪ್ರಜಾಸಮುದಾಯದ ಪ್ರೀತಿವಿಶ್ವಾಸಗಳನ್ನು ಪಡೆದಿದ್ದನು. ತರುವಾಯ---]

ಅಂದು ಅಲ್ಲಾದೀನನನ್ನು ಪಾತಾಳಗೃಹದಲ್ಲಿ ಬಂಧಿಸಿ ತನ್ನ ದೇಶಕ್ಕೆ ಹಿಂತಿರುಗಿದ ಮೊರಾಕೋದೇಶದ ಮಾಂತ್ರಿಕನು ಅಲ್ಲಾದೀನನು ತಿಂಡಿತೀರ್ಥಗಳಿಲ್ಲದೆ ಸತ್ತುಹೋಗಿರಬಹುದೆಂದು ಭಾವಿಸಿದ್ದನು. ಅದ್ಭುತದೀಪವು ತನ್ನ ಕೈಗೆ ಸಿಕ್ಕದಿರಲು ಅವನಿಗೆ ತುಂಬಾ ಬೇಸರವಾಯಿತು. ಅವನಿಗೆ ದಿನಾ ಆ ದೀಪ ಜ್ಞಾಪಕಕ್ಕೆ ಬರುತಿತ್ತು. ಆಗ ಅಲ್ಲಾದೀನನ ಮೇಲೆ ಕೋಪದಿಂದ ಕಿಡಿಕಿಡಿಯಾಗುವನು. ಒಂದು ದಿನ ಮಾಂತ್ರಿಕನಿಗೆ ಆ ದೀಪವನ್ನೂ, ಅಲ್ಲಾದೀನನ ಶವವನ್ನೂ ನೋಡುವ ಅಪೇಕ್ಷೆಯುಂಟಾಯಿತು. ಕೂಡಲೇ ಅವನು ರಂಗೋಲೆ ಹಾಕಿ ಕುಳಿತು ಮಂತ್ರವನ್ನು ಉಚ್ಚರಿಸಿ, ಅಂಜನಹಾಕಿ ನೋಡಿದನು. ಅವನಿಗೆ ಗುಹೆ ಕಾಣಿಸಿತಾದರೂ ದೀಪವಾಗಲೀ, ಅಲ್ಲಾದೀನನಾಗಲೀ ಕಾಣಬರಲಿಲ್ಲ!

ಮಾಂತ್ರಿಕನ ಮೈಮೇಲೆ ಸಾವಿರಾರು ಚೇಳುಗಳು ಹರಿದಂತಾಯಿತು. ಅಲ್ಲಾದೀನನು ಆ ದೀಪದೊಂದಿಗೆ ಗುಹೆಯಿಂದ ಹೊರಬಿದ್ದನೆಂದು ಅವನು ಗ್ರಹಿಸಿದನು. ಅವನು

ಎಸ್. ಪ್ರತಿಭಾಕುಮಾರಿ



ಕಟಕಟನೆ ಹಲ್ಲು ಕಡಿಯುತ್ತಾ “ಎಲೈ ದೌರ್ಭಾಗ್ಯನೇ, ನನ್ನನ್ನು ಧಿಕ್ಕರಿಸಿ ದೀಪವನ್ನು ಅಪಹರಿಸಿದೆಯಾ? ಇರಲಿ, ನೋಡುತ್ತಿರು ನನ್ನ ಕೈವಾಡ” ಎಂದು ಅಬ್ಬರಿಸಿದ.

ಅವನು ಅಂದೇ ಪ್ರಯಾಣಹೊರಟು, ನೇರವಾಗಿ ಚೀನಾದೇಶದ ಮುಖ್ಯಪಟ್ಟಣವನ್ನು ಸೇರಿ, ಒಂದು ಛತ್ರದಲ್ಲಿ ತಂಗಿದನು.

ಮಾಂತ್ರಿಕನು ಮಾರನೇಯದಿನ ಮುಂಜಾನೆ ನಗರವನ್ನು ನೋಡಲು ಹೊರಟನು. ಯಾರಬಾಯಲ್ಲಿ ಕೇಳಿದರೂ ಅಲ್ಲಾದೀನನ ಪ್ರಶಂಸೆಯಮಾತು. ಅಲ್ಲಾದೀನ್ ಎಂತಹ ಅಂದಗಾರ; ಎಂತಹ ಉದಾರ ಹೃದಯ; ಎಂತಹ ಸಂಪನ್ನ! ಮಾಂತ್ರಿಕನಿಗೆ ಈ ಪ್ರಶಂಸೆಗಳನ್ನು ಕೇಳಿ ಕೇಳಿ ಕಿವಿ ತೂತು ಬಿದ್ದುಹೋಯಿತು. “ನೋಡುತ್ತಿರಿ, ನಿಮ್ಮ ಬಾಯಿಂದಲೇ ಅಲ್ಲಾದೀನನ ಸಾವು ಕೋರುವಿರಿ” ಎಂದುಕೊಂಡ ಮಾಂತ್ರಿಕ. ನಗರದಲ್ಲೆಲ್ಲಾ ಅಡ್ಡಾಡಿ ಅವನು ಅಲ್ಲಾದೀನನ ಭವನದಬಳಿ ಬಂದು ನಿಂತ. “ಒಬ್ಬ ಸಾಮಾನ್ಯ ಚಿಪ್ಪಿಗನ ಮಗನಿಗೆ ಇಷ್ಟೊಂದು ಭಾಗ್ಯ ಬಂತೆ? ಭಿಕಾರಿಯೊಬ್ಬ ಇಷ್ಟೊಂದು ಐಶ್ವರ್ಯವಂತನಾದನೆ! ಲೋ, ಅಲ್ಲಾದೀನ್! ನಿನ್ನ ತಾಯಿಯ ಕೈಯಿಂದ ಮತ್ತೆ ನೂಲು ತೆಗೆಸುತ್ತೇನೆ. ನಿನ್ನನ್ನು ಸಮಾಧಿಮಾಡಲು ನಾನೇ ಸ್ವತಃ ಹಳ್ಳ ತೋಡುತ್ತೇನೆ!” ಎಂದು ಪಂಥತೊಟ್ಟನು. ಮನೆಯಮುಂದಿದ್ದ ದ್ವಾರಪಾಲಕರನ್ನು ಕೇಳಲು ಅಲ್ಲಾದೀನನು ಬೇಟೆಗೆ ಹೋಗಿರುವುದಾಗಿ ತಿಳಿದುಬಂತು. ಮಾಂತ್ರಿಕನಿಗೆ ಸಂತೋಷವಾಯಿತು. ಅಲ್ಲಾದೀನನ ಗೈರುಹಾಜರಿಯಲ್ಲಿ ತನ್ನ ಹಂಚಿಕೆ ನಿರಾತಂಕವಾಗಿ ಫಲಿಸುವುದು ಖಂಡಿತ. ಆದರೆ ಅವನಿಗೊಂದು ಅನುಮಾನವಾಯಿತು. ದೀಪ ಮನೆಯಲ್ಲೇ ಇದೆಯೋ, ಇಲ್ಲ ಅಲ್ಲಾದೀನನು ತನ್ನ ಸಂಗಡ ತೆಗೆದುಕೊಂಡು ಹೋದನೋ ಎಂಬ ವಿಷಯ ತಿಳಿದುಕೊಳ್ಳಬೇಕಿತ್ತು.

ಆದುದರಿಂದ ಅವನು ಕೂಡಲೇ ತನ್ನ ಕೋಣೆಗೆ ಹೋಗಿ ಅಂಜನ ಹಾಕಿ ನೋಡಲು ದೀಪ ಮನೆಯಲ್ಲೇ ಇರುವುದಾಗಿ ತಿಳಿಯಿತು. ಅವನಿಗೆ ಆನಂದವಾಯಿತು. ಅವನು ಒಡನೆಯೆ ತಾಮ್ರದ ಕೆಲಸಗಾರರಿದ್ದ ಸ್ಥಳಕ್ಕೆ ಹೋಗಿ ಹನ್ನೆರಡು ದೀಪಗಳನ್ನು ಖರೀದುಮಾಡಿ

ಬುಟ್ಟಿಯಲ್ಲಿಟ್ಟುಕೊಂಡು "ಹೊಸ ದೀಪಗಳು ಹೊಸ ದೀಪಗಳು. ಹಳೆ ದೀಪಗಳಿಗೆ ಹೊಸ ದೀಪಗಳು" ಎಂದು ಕೂಗುತ್ತಾ ಅಲ್ಲಾದೀನನ ಮನೆಯಬಳಿಗೆ ಹೊರಟನು. ಮಾಂತ್ರಿಕನು ತಲೆಗೆ ಹಾಕಿದ್ದ ದೊಡ್ಡ ರುಮಾಲು, ಅವನ ವಿಚಿತ್ರವ್ಯವಹಾರ ದಾರಿಯಲ್ಲಿ ಆಡಿಕೊಳ್ಳುತ್ತಿದ್ದ ಹುಡುಗರ ಗಮನವನ್ನು ಸೆಳೆಯಿತು. ಅವರು ಆಟ ನಿಲ್ಲಿಸಿ ಅವನಹಿಂದೆ ಬಿದ್ದರು.

ಮಾಂತ್ರಿಕನು ಅಲ್ಲಾದೀನನ ಭವನದಬಳಿಗೆ ಬಂದು "ಹಳೇ ದೀಪಗಳಿಗೆ ಹೊಸ ದೀಪ ಕೊಡುತ್ತೇನೆ" ಎಂದು ಕೂಗಲಾರಂಭಿಸಿದನು. ತೊಂಬತ್ತು ಕಿಟಕಿಗಳ ಬುರುಜಿನಲ್ಲಿದ್ದ ರಾಜಕುಮಾರಿಗೆ ಮಾಂತ್ರಿಕನ ಕೂಗು, ಹುಡುಗರ ಗಲಾಟೆ ಕೇಳಿಸಲು ಆಕೆ ಹೊರಗೆ ಇಣಿಕಿ ನೋಡಿದಳು. ಆ ವಿಚಿತ್ರ ಮನುಷ್ಯನನ್ನು ನೋಡಿ ಆಕೆ ಗಹಗಹಿಸಿ ನಕ್ಕಳು. ದಾಸಿಯರೂ ಕಿಲಕಿಲ ನಕ್ಕರು.

ಅವರಲ್ಲೊಬ್ಬಳು ತನ್ನ ಯಜಮಾನಳೊಂದಿಗೆ "ತಾಯಿ, ನಾನು ಯಜಮಾನರ ಕೋಣೆಯನ್ನು ಗುಡಿಸುವಾಗ ಅಲ್ಲೊಂದು ಮಣೆಯಮೇಲೆ ಹಳೆಯ ತಾಮ್ರದ ದೀಪವನ್ನು ನೋಡಿದೆ. ಅದನ್ನು ತೆಗೆದುಕೊಂಡು ಹೋಗಿ ಆ ಮಾರಾಟಗಾರನಿಗೆ ತೋರಿಸಿ ಹೊಸ ದೀಪವನ್ನು ತರಲೇ?" ಎಂದು ಕೇಳಿದಳು. ಅದು ಅದ್ಭುತದೀಪವೇ ಹೊರತು ಬೇರೆಯಲ್ಲ. ಅಲ್ಲಾದೀನನು ಬೇಟೆಗೆ ಹೋಗುವಮುನ್ನ ಅದನ್ನು ಜೋಪಾನವಾದ



ಸ್ಥಳದಲ್ಲಿ ಬಚ್ಚಿಡಲು ಮರೆತುಬಿಟ್ಟಿದ್ದನು. ವಿಧಿಯನ್ನು ತಪ್ಪಿಸಲು ಯಾರಿಂದ ಸಾಧ್ಯ? ಪಾಪ, ರಾಜಕುಮಾರಿಗೆ ಆ ದೀಪದ ವಿಷಯವಾಗಲಿ, ಅದರ ಮಹಿಮೆಯಾಗಲೀ, ತಿಳಿಯದು. ಆಕೆ ದಾಸಿಯೊಂದಿಗೆ "ಹೌದು, ಹಾಗೇಯೇ ಮಾಡೋಣ. ಆ ಹಳೇ ದೀಪವನ್ನು ಸೇವಕನ ಕೂಡಕೊಟ್ಟು ಕಳುಹಿಸು. ಹೊಸದೀಪ ತರಲಿ. ನೋಡೋಣ. ಒಂದುವೇಳೆ ಆ ಹುಚ್ಚ ನಿಜವಾಗಿ ಹೊಸದೀಪ ಕೊಟ್ಟನೋ, ನಾವು ಸದಾ ಅವನನ್ನು ನೆನೆಸಿಕೊಂಡು ನಗುತ್ತಿರಬಹುದು" ಎಂದಳು.

ದಾಸಿ ಕೂಡಲೇ ಅಲ್ಲಾದೀನನ ಕೋಣೆಗೆ ಹೋಗಿ ಅಲ್ಲಿದ್ದ ದೀಪವನ್ನು ತಂದು ಸೇವಕನೊಂದಿಗೆ ಕೊಟ್ಟು ಕಳುಹಿಸಿದಳು. ಅವನು





ಮಿರುಗುವ ಒಂದು ಹೊಸದೀಪವನ್ನು ಆರಿಸಿ ತೆಗೆದುಕೊಂಡು ತನ್ನ ಯಜಮಾನಿಗೆ ತೋರಿಸಲು ಲಗುಬಗನೆ ಹೊರಟನು.

ಇಷ್ಟರಲ್ಲಿ ಮಾಂತ್ರಿಕನು ತನ್ನ ಬುಟ್ಟಿ ಮತ್ತು ಹೊಸದೀಪಗಳನ್ನು ತನ್ನ ಸಂಗಡ ಬಂದಿದ್ದ ಹುಡುಗರ ಗುಂಪಿನಕಡೆ ಎಸೆದು, ಅದ್ಭುತದೀಪವನ್ನು ತೆಗೆದುಕೊಂಡು ನಿರ್ಜನ ಪ್ರದೇಶಕ್ಕೆ ಹೋಗಿ, ಅಲ್ಲಿ ದೀಪವನ್ನು ಉಜ್ಜಿದನು. ಕೂಡಲೇ ದೀಪದಭೂತ ಪ್ರತ್ಯಕ್ಷವಾಗಿ "ಜೀಯ, ಏನಪ್ಪಣೆ?" ಎಂದು ಕೇಳಿತು.

"ಅಲ್ಲಾದೀನನ ಭವನವನ್ನು ಮೊರಾಕೋ ನಗರಕ್ಕೆ ಸೇರಿಸು. ಹಾಗೆಯೇ ನನ್ನನ್ನು ಆ ಭವನದಲ್ಲಿ ಸೇರಿಸು" ಎಂದ ಮಾಂತ್ರಿಕ.

ಅವನು ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ ಅಲ್ಲಾದೀನನ ಭವನ, ಅದರಲ್ಲಿದ್ದ ಸಮಸ್ತ ವಸ್ತುಗಳೂ, ಮೊರಾಕೋದೇಶದ ತೋಟವೊಂದರ ಮಧ್ಯೆ ಇತ್ತು. ಮಾಂತ್ರಿಕನುಕೂಡ ಆ ಭವನದೊಳಗಿದ್ದ!

ಮಾರನೇಯದಿನ ರಾಜನು ತನ್ನ ಕೋಣೆಯ ಕಿಟಕಿಯಿಂದ ಮಗಳ ಮನೆಯಕಡೆ ನೋಡಿ ಅಲ್ಲಿ ಅಲ್ಲಾದೀನನ ಭವನ ಕಾಣದಿರಲು ದಿಗ್ಭ್ರಮೆಯನಾದನು. ಅಲ್ಲಾದೀನನ ಭವನವಿದ್ದ ಜಾಗದಲ್ಲಿ ವಿಶಾಲವಾದ ಮೈದಾನ ಮತ್ತು ಗುಂಡಿಗಳುಮಾತ್ರ ಕಾಣಿಸಿದುವು.

"ಏನಿದು ಆಶ್ಚರ್ಯ? ಏನಾಯಿತು?" ಎಂದು ರಾಜನು ಯೋಚಿಸುತ್ತಿರಲು, ಆತನನ್ನು ಸಭೆಗೆ ಕರೆದುಕೊಂಡು ಹೋಗಲು

ಅದನ್ನು ಮಾಂತ್ರಿಕನ ಬಳಿಗೆ ತೆಗೆದುಕೊಂಡು ಹೋಗಿ "ಯಜಮಾನಮ್ಮನವರು ಇದಕ್ಕೆ ಬದಲಾಗಿ ಹೊಸದೀಪ ತರುವಂತೆ ಹೇಳಿದ್ದಾರೆ" ಎಂದನು. ಮಾಂತ್ರಿಕನು ಕೂಡಲೇ ಅದ್ಭುತ ದೀಪವನ್ನು ಗುರ್ತಿಸಿ ಆನಂದದಿಂದ ಪುಲಕಿತನಾದನು. ಅವನ ಕೈಗಳು ಕಂಪಿಸಿದುವು.

"ಯಾಕಯ್ಯಾ ಹಾಗೆ ನಡುಗುತ್ತಿರುವೆ? ಇದಕ್ಕೆ ಬದಲಾಗಿ ಹೊಸದೀಪ ಕೊಡುವುದಿಲ್ಲವೇ?" ಎಂದು ಜಬರಿಸಿ ಕೇಳಿದ ಸೇವಕ.

ಮಾಂತ್ರಿಕನು ತನ್ನ ಉದ್ರೇಕವನ್ನು ತಡೆಹಿಡಿದು ಸೇವಕನ ಕೈಯಲ್ಲಿದ್ದ ದೀಪವನ್ನು ಕಸಿದುಕೊಂಡು ತನ್ನ ಬುಟ್ಟಿಯನ್ನು ತೋರಿಸಿ "ನಿನ್ನ ಇಷ್ಟಬಂದ ದೀಪವನ್ನು ತೆಗೆದುಕೊಂಡು ಹೋಗು" ಎಂದನು. ಸೇವಕನು ಥಳಥಳನೆ

ಮಂತ್ರಿ ಬಂದನು. ರಾಜನು ಅವನನ್ನು ಕುರಿತು "ಮಂತ್ರಿ, ರಾಜಕುಮಾರಿಯ ಭವನ ವೇನಾಯಿತು?" ಎಂದು ಕೇಳಿದನು.

ರಾಜನಿಗೆ ತಲೆ ಕೆಟ್ಟಿರಬೇಕೆಂದು ಭಾವಿಸಿ "ಎಂಥಾ ವಿಚಿತ್ರವಾದ ಪ್ರಶ್ನೆ, ಮಹಾಪ್ರಭು" ಎಂದ ಮಂತ್ರಿ.

"ಹಾಗಾದರೆ ನಿನಗೆ ಗೊತ್ತಿಲ್ಲವೆಂದಾಯಿತು?" ಎಂದ ರಾಜ.

"ಇಲ್ಲ ನನಗೇನೂ ತಿಳಿಯದು, ಮಹಾಪ್ರಭು," ಎಂದ ಮಂತ್ರಿ ನಿಬ್ಬೆರಗಾಗಿ.

"ನೀನಿಂದು ಅಲ್ಲಾದೀನನ ಭವನವನ್ನು ನೋಡಿಲ್ಲವೆಂದಾಯಿತು. ಬಾ, ನೋಡುವಿಯಂತೆ" ಎಂದು ರಾಜನು ಮಂತ್ರಿಯನ್ನು ಕಿಟಕಿಯಬಳಿಗೆ ಎಳೆದುಕೊಂಡು ಹೋದನು.

"ಅರೆ ಅಲ್ಲಾ. ಇಡಿಯ ಭವನ ಮಾಯವಾಗಿದೆ! ಅಲ್ಲಾದೀನನು ಮಾಂತ್ರಿಕನೆಂದು ನಾನು ಆಗಲೇ ಹೇಳಿದ್ದೆ. ಈಗಲಾದರೂ ಒಪ್ಪಿಕೊಳ್ಳುವಿರಷ್ಟೇ?" ಎಂದ ಮಂತ್ರಿ.

ರಾಜನು ರೌದ್ರಾವೇಶದಿಂದ "ಆ ನೀಚ, ಆ ಮಾಂತ್ರಿಕ, ಆ ವಂಚಕನೆಲ್ಲಿ? ಅಲ್ಲಾದೀನನು ಎಲ್ಲಿ?" ಎಂದು ಅಬ್ಬರಿಸಿದ.

"ಮಹಾಪ್ರಭು, ಆತನು ಬೇಟೆಗೆ ಹೋಗಿದ್ದಾನೆ. ಇಂದು ಹಿಂತಿರುಗವ ನಿರೀಕ್ಷೆಯಿದೆ. ನಾನು ಆತನನ್ನು ಎದುರುಗೊಂಡು ಆ ಭವನದ ವಿಷಯವನ್ನು ಕೇಳಿ ತಿಳಿದುಕೊಂಡು ಬರುತ್ತೇನೆ. ಅಪ್ಪಣೆ ಕೊಡಿ" ಎಂದ ಮಂತ್ರಿ. ಇಂದಿಗೆ ತನ್ನ ಅನೇಕ ದಿನಗಳ ಸೇಡು ತೀರಿಸಿಕೊಳ್ಳಲು ಅವಕಾಶ ಸಿಕ್ಕಿ





ತೆಂದು ಅವನು ತುಂಬಾ ಹರ್ಷಿತನಾದನು. "ಅದರ ಅಗತ್ಯವಿಲ್ಲ. ಆ ದುರುಳನ ಹೆಡ ಮುರಿಕಟ್ಟಿ ನನ್ನಬಳಿಗೆ ಎಳೆದು ತರುವಂತೆ ಸರದಾರನಿಗೆ ಹೇಳು" ಎಂದ ರಾಜ.

ಮಂತ್ರಿ ರಾಜಾಜ್ಞೆಯನ್ನು ಸರದಾರನಿಗೆ ತಿಳಿಸಿದನು. ಸರದಾರನು ನೂರು ಜನ ಭಟ ರನ್ನು ಸಂಗಡ ಕರೆದುಕೊಂಡು ಅಲ್ಲಾದೀನ ನನ್ನು ಹುಡುಕಿಕೊಂಡು ಹೊರಟನು. ನಗರ ದ್ವಾರವನ್ನುದಾಟಿ ಸ್ವಲ್ಪದೂರ ಹೋಗಲು ಅವ ರಿಗೆ ಅಲ್ಲಾದೀನನು ಎದುರಾದನು. ಕೂಡಲೇ ಸರದಾರನು ಅತಿ ವಿನಯದಿಂದ ಅಲ್ಲಾ ದೀನನೊಂದಿಗೆ "ಸ್ವಾಮಿ, ನಮ್ಮನ್ನು ಕ್ಷಮಿಸ ಬೇಕು. ನಾನು ಮಹಾರಾಜರ ನೌಕರ. ಅವರ ಆಜ್ಞೆಯನ್ನು ಪಾಲಿಸುವುದು ನನ್ನ ಕರ್ತವ್ಯ ತಮಗೆ ಸಂಕೋಲೆಹಾಕಿ ಎಳೆದುತರುವಂತೆ ಆಜ್ಞೆಯಾಗಿದೆ. ನನಗೆ ನೀವು ಅನೇಕ ವಿಧದಲ್ಲಿ ಸಹಾಯ ಮಾಡಿರುವಿರಿ. ನಾನು ನಿಮಗೆ ಚಿರ ಋಣಿ. ಈಗ ಕರ್ತವ್ಯ ಪಾಲಿಸಲೇಬೇಕಾಗಿದೆ, ಕ್ಷಮಿಸಬೇಕು" ಎಂದ.

ಅಲ್ಲಾದೀನನು ಆಶ್ಚರ್ಯದಿಂದ ಮೂಕ ನಾದನು. ಕೆಲಕ್ಷಣಾನಂತರ "ನಾನು ಮಾಡಿದ ಅಪರಾಧವೇನೆಂದು ಮಹಾರಾಜರು ಹೇಳಿ ದರೇ? ಏಕೆಂದರೆ ನಾನು ಯಾವ ದ್ರೋಹ ವನ್ನೂ ಬಗೆಯಲಿಲ್ಲ" ಎಂದ.

"ನಮ್ಮೊಂದಿಗೆ ಮಹಾರಾಜರು ಏನೂ ಹೇಳಲಿಲ್ಲ," ಎಂದ ಸರದಾರ.

"ಹಾಗಾದರೆ ನಿಮ್ಮ ಕರ್ತವ್ಯವನ್ನು ನೀವು ಮಾಡಿ," ಎಂದು ಅಲ್ಲಾದೀನನು ಕುದುರೆಯಿಂದ ಕೆಳಗಿಳಿದನು. ಸರದಾರನು ಅವನ ಕೈಗಳಿಗೆ ಸಂಕೋಲೆತೊಡಿಸಿ, ಸರಪಳಿ ಯನ್ನು ಸೊಂಟಕ್ಕೆಬಿಗಿದು, ಒಂದು ಕೊನೆ ಯನ್ನು ಕೈಯಲ್ಲಿ ಹಿಡಿದು ಸವಾರಿಮಾಡಿ ಕೊಂಡು ನಗರಕ್ಕೆ ಹಿಂತಿರುಗಿದನು. ಅಲ್ಲಾ ದೀನನು ನಡೆದುಕೊಂಡು ಬಂದನು.

ಸರದಾರನೂ, ರಾಜಭಟರೂ ಅಲ್ಲಾದೀನ ನನ್ನು ಹಿಡಿದುತರುತ್ತಿರುವ ದೃಶ್ಯವನ್ನು ಪ್ರಜೆ ಗಳು ನೋಡಿದರು. ಯಾವಕಾರಣದಿಂದಲೋ ರಾಜನು ಅಲ್ಲಾದೀನನ ಶಿರಚ್ಛೇದನಮಾಡಲು ನಿರ್ಧರಿಸಿರುವುದಾಗಿ ಅವರು ಗ್ರಹಿಸಿದರು. ಅವರಿಗೆ ಅಲ್ಲಾದೀನನಲ್ಲಿ ಅಪಾರ ಪ್ರೇಮ; ವಿಶ್ವಾಸ. ಆದುದರಿಂದ ಪ್ರಜೆಗಳು ವಿವಿಧ




ಆಯುಧಗಳನ್ನು ಹಿಡಿದು ಸರದಾರನನ್ನು ಹಿಂಬಾಲಿಸಿದರು. ಅರಮನೆಯಕಡೆ ಹೋಗುತ್ತಿದ್ದಂತೆ ಈ ಗುಂಪು ಹೆಚ್ಚುತ್ತಲಿತ್ತು. ಕ್ಷಣ ಕ್ಷಣಕ್ಕೆ ಜನರ ಉದ್ರೇಕ ಅಧಿಕವಾಗುತಿತ್ತು.

ನೂರುಜನ ಭಟರಿದ್ದರೂ ಸಹ ಅಲ್ಲಾದೀನನನ್ನು ಅರಮನೆಯ ಪ್ರಾಂಗಣಕ್ಕೆ ಕರೆದುಕೊಂಡು ಹೋಗುವುದು ಸರದಾರನಿಗೆ ಕಷ್ಟಸಾಧ್ಯವಾಯಿತು. ಪ್ರಜೆಗಳು ಹಸಿದ ತೋಳಗಳಂತೆ ಕೆರಳಿದ್ದರು. ಸರದಾರನು ಅಲ್ಲಾದೀನನೊಂದಿಗೆ ಒಳಗೆ ಪ್ರವೇಶಿಸಿದಕೂಡಲೇ ಅವರು ಭಯಂಕರವಾಗಿ ಅರಚುತ್ತಾ "ಅಲ್ಲಾದೀನನ ಬಿಡುಗಡೆಯಾಗಲಿ" ಎಂದು ಉದ್ಗಾರಮಾಡಿದರು. ರಾಜನು ಮಿತಿಮೀರಿ ಕೋಪಗೊಂಡಿದ್ದನು. ಅಲ್ಲಾದೀನನು ತನ್ನ ಮುಂದೆ ಬಂದು ನಿಂತಕೂಡಲೇ ನಡೆದ ವಿಷಯವೇನೆಂದು ಕೇಳಿ ತಿಳಿದುಕೊಳ್ಳುವುದರ ಬದಲಾಗಿ "ಈ ದುಷ್ಟನ ತಲೆ ಕಡಿದುಹಾಕಿ" ಎಂದು ಭಟರಿಗೆ ಆಜ್ಞಾಪಿಸಿದನು.

ತಳವಾರನು ಬಂದು ಅಲ್ಲಾದೀನನ ಕೈಕೋಳಗಳನ್ನು ಕಳಚಿ, ಅವನ ಕಣ್ಣಿಗೆ ಬಟ್ಟೆಸುತ್ತಿ ವಧಸ್ಥಾನಕ್ಕೆ ಕರೆದುಕೊಂಡು ಹೋದನು. "ಅಲ್ಲಾಗೆ ನಿನ್ನ ಕೊನೆಯ ಪ್ರಾರ್ಥನೆ ಸಲ್ಲಿಸು" ಎಂದ. ಅಲ್ಲಾದೀನನು ಮೊಣಕಾಲೂರಿ ಕುಳಿತು ಪ್ರಾರ್ಥನೆಮಾಡುಲು ಸಿದ್ಧನಾದನು. ವಧಿಕನ ಖಡ್ಗ ಅಲ್ಲಾದೀನನ ಕತ್ತಿನಮೇಲೆ ಬೀಳುವಷ್ಟರಲ್ಲಿ ಹೊರಗಿದ್ದ ಪ್ರಜಾಸಮುದಾಯ ಪ್ರಹರಿಗೋಡೆಯನ್ನು ಹತ್ತಿ ಒಳಕ್ಕೆಹಾರಿದರು. ಕೆಲವರು ರಾಜದ್ವಾರವನ್ನು ಮುರಿದುಹಾಕಲು ಪ್ರಯತ್ನಿಸುತಿದ್ದರು. ರಾಜನು ತಳವಾರನೊಂದಿಗೆ "ನಿಲ್ಲಿ" ಎಂದು ಹೇಳಿ ಸರದಾರನಕಡೆ ತಿರುಗಿ "ಅಲ್ಲಾದೀನನ ತಲೆ ಕಡಿಯುವುದಿಲ್ಲವೆಂದು ಜನರಿಗೆ ಹೇಳು" ಎಂದು ಆಜ್ಞಾಪಿಸಿದನು. ಸರದಾರನು ರೊಚ್ಚಿಗೆದ್ದ ಜನಾಸಮುದಾಯಕ್ಕೆ ಹೀಗೆಂದು ಹೇಳಿದಕೂಡಲೇ ಅವರು ಶಾಂತರಾದರು. ಅವರು ಮಹಾದ್ವಾರವನ್ನು ಮುರಿಯುವ ಮತ್ತು ಗೋಡೆಹಾರುವ ಪ್ರಯತ್ನ ನಿಲ್ಲಿಸಿದರು.

ಅಲ್ಲಾದೀನನ ಕಣ್ಣಿಗೆ ಕಟ್ಟಿದ ಬಟ್ಟೆಯನ್ನು ಬಿಚ್ಚಲಾಯಿತು. ಅವನು ಎದ್ದುನಿಂತು ಗದ್ಗದಸ್ವರದಲ್ಲಿ "ಮಹಾಪ್ರಭೂ

ನನಗಿಂತಹ ಅವಮಾನವಮಾಡಲು ಕಾರಣ ವೇನೆಂದು ತಿಳಿಸುವಿರಾ? ನನ್ನಿಂದ ನಡೆದ ಅಪರಾಧವೇನು?'' ಎಂದು ರಾಜನನ್ನು ಕೇಳಿದನು. "ಏನು ಅಪರಾಧವಾಯಿತೋ ನಿನಗೆ ತಿಳಿಯದೆ? ಬಾ, ನನ್ನೊಂದಿಗೆ ಬಾ, ತೋರಿಸುತ್ತೇನೆ" ಎಂದು ರಾಜನು ಅಲ್ಲಾದೀನನನ್ನು ಅರಮನೆಯ ಹಿಂಭಾಗಕ್ಕೆ ಕರೆದುಕೊಂಡುಹೋದನು. ಅಲ್ಲಿ ತನ್ನ ಭವನ ಕಾಣದಿರಲು ಅಲ್ಲಾದೀನನು ದಿಗ್ಭ್ರಮೆಗೊಂಡನು. ಮಾತೇ ಹೊರಡದಾಯಿತು.

ರಾಜನು "ಎಲವೋ ನೀಚ, ನನ್ನಮಗಳೆಲ್ಲಿ? ನನ್ನ ಪ್ರಾಣಪ್ರದವಾದ ಮಗಳೆಲ್ಲಿ? ನನ್ನ ಏಕೈಕಪುತ್ರಿ, ಅಯ್ಯೋ" ಎಂದು ಉದ್ಗಾರಮಾಡಿದನು.

"ಮಹಾರಾಜ. ನಾನೇನೂ ಅರಿಯೆ," ಎಂದ ಅಲ್ಲಾದೀನ್.

"ಚೆನ್ನಾಗಿ ಕೇಳು. ನಿನ್ನ ದಿಕ್ಕೆಟ್ಟ ಭವನ ನನಗೆ ಬೇಕಿಲ್ಲ. ಕೂಡಲೇ ನನ್ನ ಮಗಳನ್ನು ನನಗೆ ತೋರಿಸದಿದ್ದರೆ ನಿನ್ನ ತಲೆ ಹಾರಿಸುವೆನು" ಎಂದ ರಾಜ.

"ಮಹಾಪ್ರಭು, ವಿಧಿಯನ್ನು ತಪ್ಪಿಸಲಾದೀತೇ? ನಾನು ಮಾಡದ ಅಪರಾಧಕ್ಕೆ ನನ್ನ ತಲೆಯರ್ಪಿಸಬೇಕೆಂದು ವಿಧಿ ಲಿಖಿತವಾಗಿದ್ದರೆ ಅರ್ಪಿಸಲೇಬೇಕು. ಆದರೆ ನನ್ನ ಪ್ರಾಣಪ್ರಿಯಳನ್ನು ಹುಡುಕಬೇಕು. ನನಗೆ ನಲವತ್ತುದಿನ ಅವಧಿ ಕೊಡಿ" ಎಂದು ಅಲ್ಲಾದೀನನು ಬೇಡಿಕೊಂಡನು.

"ಹುಂ, ಗಡು ಕೊಟ್ಟಿದ್ದೇನೆ. ಆದರೆ ಆ ಅವಧಿಯಲ್ಲಿ ನನ್ನ ಮಗಳನ್ನು ತೋರಿಸದಿದ್ದರೆ ನೀನೆಲ್ಲಿದ್ದರೂ ಹಿಡಿದು ತರಿಸಿ ಶಿಕ್ಷಿಸುವೆನು. ಈ ಮಾತು ಜ್ಞಾಪಕದಲ್ಲಿರಲಿ" ಎಂದ.

ಅಲ್ಲಾದೀನನು ತಲೆ ತಗ್ಗಿಸಿಕೊಂಡು ಹೊರಗೆಬಂದನು. ಅವನನ್ನು ಈಗ ಗುರ್ತಿಸಲೂ ಅಸಾಧ್ಯವಾಗಿತ್ತು. ದುಃಖದಿಂದ ಅವನ ರೂಪವೇ ಬದಲಾಯಿಸಿತು. ಅವನು ತನಗೆ ಸಿಕ್ಕಿದವರನ್ನು "ನನ್ನ ಮನೆ ಎಲ್ಲಿ? ಮಡದಿ ಎಲ್ಲಿ?" ಎಂದು ಕೇಳಲಾರಂಭಿಸಿದನು. ಅಲ್ಲಾದೀನನ ಮತಿ ಕೆಟ್ಟಿತು ಪಾಪ" ಎಂದುಕೊಂಡರು ಜನ. ಅಲ್ಲಾದೀನನು ನಗರವನ್ನು ಬಿಟ್ಟು ಹೋದನು. [ಇನ್ನೂ ಇದೆ]



# ಊಹಾಸುಂದರಿ



**ಬೇ**ಸರಹೊಂದದ ತ್ರಿವಿಕ್ರಮುನು ಮತ್ತೆ ಮರದಬಳಿಗೆ ಹೋಗಿ, ಶವವನ್ನು ಕೆಳಗಿಳಿಸಿ ಭುಜದಮೇಲೆ ಹಾಕಿಕೊಂಡು ಮೌನವಾಗಿ ಶ್ಮಶಾನದತ್ತ ನಡೆಯತೊಡಗಿದನು. ಆಗ ಶವದಲ್ಲಿದ್ದ ಬೇತಾಳ "ರಾಜನೇ, ನೀನು ಈ ಅರ್ಧರಾತ್ರಿಹೊತ್ತಿನಲ್ಲಿ ಪಡುತ್ತಿರುವ ಪಾಡು ಕಂಡು ನನಗೆ ಇಂದ್ರಸೇನನ ಪ್ರಣಯಕಥೆ ಜ್ಞಾಪಕಕ್ಕೆ ಬರುತ್ತದೆ. ಆತನು ಬಹಳ ದೀಕ್ಷೆಯಿಂದ ಹುಡುಕಿಯೂ ತಾನು ಪ್ರೇಮಿಸಿದ ಕನ್ಯೆಯನ್ನು ಗುರುತುಹಿಡಿಯಲಾರದೆ ಹೋದನು. ಕೇಳು" ಎಂದು ಈ ರೀತಿ ಹೇಳಲಾರಂಭಿಸಿತು.

"ಪೂರ್ವಕಾಲದಲ್ಲಿ ಇಂದ್ರಸೇನನೆಂಬ ಕ್ಷತ್ರಿಯಕುಮಾರನಿದ್ದನು. ಅವನು ಬಾಲ್ಯದಲ್ಲೇ ಸಮಸ್ತ ವಿದ್ಯೆಗಳನ್ನು ಅಭ್ಯಾಸಮಾಡಿ ತುಂಬಾ ಮೇಧಾವಿಯೆಂದು ಹೆಸರುಗಳಿಸಿದ್ದನು. ಸಾಮಾನ್ಯವಾಗಿ ಸ್ತ್ರೀಯರು ಅಲ್ಪಮತಿಗಳು. ಅವರಿಗೆ ಒಡವೆ, ಬಟ್ಟೆಬರೆಗಳಮೇಲಿರುವ ಆಸಕ್ತಿ ಇತರ ವಿಷಯಗಳಲ್ಲಿರಲಾರವು.



ಅವರು ಗಹನವಾದ, ಗಂಭೀರವಾದ ವಿಷಯಗಳನ್ನು ಕುರಿತು ಯೋಚಿಸುವುದಿಲ್ಲ. ಸ್ತ್ರೀ ಸಮೂಹದಮೇಲೆ ಆತನಿಗಿದ್ದ ಅಭಿಪ್ರಾಯವಿದು. ಅಂತಹ ಸ್ತ್ರೀಯನ್ನು ಮದುವೆಮಾಡಿಕೊಳ್ಳುವುದು ಆತನಿಗೆ ಇಷ್ಟವಿರಲಿಲ್ಲ. ಚುರುಕುಬುದ್ಧಿಯೂ, ಅಸಾಧಾರಣ ತಿಳುವಳಿಕೆಯೂ, ಉದಾರಹೃದಯಳೂ ಆದ ಕನ್ಯೆಯನ್ನೇ ಮದುವೆಯಾಗಲು ಆತನು ನಿರ್ಧರಿಸಿದ್ದನು. ಆದರೆ ಆತನು ಕೋರುವಂತಹ ಕನ್ಯೆ ಸಿಗುವುದು ಸುಲಭವಾಗಿರಲಿಲ್ಲ.

ಇಂದ್ರಸೇನನಿಗೆ ಒಬ್ಬ ರಾಜನಬಳಿ ನೌಕರಿ ದೊರೆಯಿತು. ವಯಸ್ಸಿನಲ್ಲಿ ಚಿಕ್ಕವನಾದರೂ ಬುದ್ಧಿಯಲ್ಲಿ ಪ್ರಚಂಡನೆಂದು ರಾಜನಿಗೂ ಆತನ ಆಸ್ಥಾನದ ಇತರ ಅಧಿಕಾರಿಗಳಿಗೂ ತಿಳಿದುಹೋಯಿತು. ಆದುದರಿಂದ ಎಲ್ಲರಿಗೂ ಇಂದ್ರಸೇನನನ್ನು ಕಂಡರೆ ಗೌರವವಿತ್ತು.

ಅದೇ ರಾಜನ ನೌಕರಿಯಲ್ಲಿ ಒಬ್ಬ ವೃದ್ಧ ಸಾಮಂತನಿದ್ದನು. ಆತನ ಹೆಸರು ಚಂದ್ರವರ್ಮ. ಊರಾಚೆ ಬೆಟ್ಟಗುಡ್ಡಗಳ ನಡುವೆ ಆತನಿಗೊಂದು ಭವ್ಯಭವನವಿತ್ತು. ಅಲ್ಲಿ ಆತನ ಬಂಧುಬಳಗ ಸುಮಾರು ನಾನೂರುಮಂದಿಯಿದ್ದರು. ಅವರಲ್ಲಿ ಮದುವೆಗೆ ಸಿದ್ಧರಾದ ಕನ್ಯೆಯರು ಬಹುಮಂದಿಯಿದ್ದರು. ಇಂದ್ರಸೇನನು ಅವರಲ್ಲೊಬ್ಬಳನ್ನು ಮದುವೆಯಾದರೆ ತಾನು ಧನ್ಯನೆಂದು ಭಾವಿಸಿದ್ದ ಚಂದ್ರವರ್ಮ. ಒಂದು ದಿನ ಇಂದ್ರಸೇನನೊಂದಿಗೆ "ವತ್ಸಾ, ಪ್ರಭುಗಳು ಒಂದು ತಿಂಗಳಕಾಲ ತೀರ್ಥಯಾತ್ರೆಗೆ ಹೋಗುವವರಿದ್ದಾರೆ. ಆ ಸಮಯದಲ್ಲಿ ನೀನು ನನ್ನ ಅತಿಥಿಯಾಗಿ ನನ್ನ ಮನೆಯಲ್ಲಿದ್ದರೆ ನನಗೆ ಬಹಳ ಸಂತೋಷವಾಗುತ್ತದೆ" ಎಂದನು. ಇಂದ್ರಸೇನನು ಆನಂದದಿಂದ ಆತನ ಆಹ್ವಾನವನ್ನು ಅಂಗೀಕರಿಸಿದನು.

ರಾಜನು ಅತ್ತ ಯಾತ್ರೆಗೆ ಹೊರಟ ದಿನವೇ ಇಂದ್ರಸೇನನು ಚಂದ್ರವರ್ಮನ ಮನೆಗೆ ನಡೆದನು. ಚಂದ್ರವರ್ಮನ ಮನೆ ಅರಮನೆಯಂತೆ ಶೋಭಾಯಮಾನವಾಗಿತ್ತು. ಆದರೆ ಇಲ್ಲಿ ಅರಮನೆಯಲ್ಲಿದ್ದಂತೆ ಯಾವ ನಿರ್ಬಂಧವೂ ಇರಲಿಲ್ಲ. ಯಾರು ಬೇಕಾದರೂ ತಮ್ಮಿಷ್ಟಬಂದಕಡೆಗೆ ಹೋಗಬಹುದಾಗಿತ್ತು. ಭವನದ ಸುತ್ತಲೂ ವಿವಿಧ ಫಲಗಳ ತೋಪು, ಪುಷ್ಪಗಳ ತೋಟಗಳೂ ಇದ್ದುವು. ಭವನಕ್ಕೆ





ಸ್ವಲ್ಪ ದೂರದಲ್ಲಿ ಬೆಟ್ಟಗಳಿದ್ದುವು. ಅಲ್ಲಿಗೆ ಬಂದ ಕ್ಷಣದಿಂದ ಇಂದ್ರಸೇನನಿಗೆ ಸ್ವರ್ಗ ಲೋಕಕ್ಕೆ ಬಂದಂತಿತ್ತು. ಆತನಿಗೆ ಅಲ್ಲಿ ತುಂಬಾ ಸ್ವೇಚ್ಛೆ ಲಭಿಸಿತು. ಬಂದ ದಿನದಂದೇ ಆತನು ಚಂದ್ರವರ್ಮನ ಬಳಗದವರೆಲ್ಲರ ಪರಿಚಯಮಾಡಿಕೊಂಡನು. ಅವರಲ್ಲಿ ಅನೇಕರು ಕನ್ಯೆಯರಿದ್ದರು. ಕೆಲವರು ಸುರೂಪಿಗಳೂ ಇದ್ದರು. ಆದರೆ ಅವರ ಬುದ್ಧಿವಂತಿಕೆಯ ವಿಷಯ ಇಂದ್ರಸೇನನಿಗೆ ತಿಳಿಯಲಿಲ್ಲ.

ಚಂದ್ರವರ್ಮನ ಮನೆಗೆ ಅತಿಥಿಯಾಗಿ ಬಂದ ಮಾರನೇಯ ದಿನವೇ ಇಂದ್ರಸೇನನಿಗೆ ಸುತ್ತಮುತ್ತಲಿದ್ದ ಬೆಟ್ಟಗುಡ್ಡಗಳ ಮೇಲೆ ಒಬ್ಬೊಂಟಿಗನಾಗಿ ಓಡಾಡುವ ಅಪೇಕ್ಷೆಯುಂಟಾಯಿತು. ಬೆಟ್ಟದಶಿಖರದಮೇಲೆ ಕುಳಿತು ಸುತ್ತಲೂ ನೋಡುತ್ತಾ, ನಿರ್ಮಲ ಗಾಳಿ ಸೇವಿಸುವುದು ಆತನಿಗೆ ಪ್ರಿಯವಾಗಿತ್ತು.

ಆದರೆ ಆತನು ಹತ್ತಿದ್ದ ಬೆಟ್ಟದಮೇಲೆ ಹೋಗಲು ಸ್ವಲ್ಪದೂರಮಾತ್ರ ಕಾಲುದಾರಿಯಿತ್ತು. ಶಿಖರವನ್ನು ಮುಟ್ಟಬೇಕೆಂದರೆ ಮೆಲ್ಲನೆ ಕಲ್ಲುಬಂಡೆಗಳಮೇಲೆ ತೆವಳಿಕೊಂಡು ಹೋಗಬೇಕು. ಅದು ತುಂಬಾ ಅಪಾಯಕರ. ಆದುದರಿಂದ ಯಾರೂ ಆ ಶಿಖರವನ್ನು ತಲುಪಿದ ಗುರುತು ಕಾಣಬರಲಿಲ್ಲ.

"ಯಾರೂ ಹತ್ತದ ಈ ಶಿಖರವನ್ನು ನನ್ನ ಸೊತ್ತಾಗಿಮಾಡಿಕೊಳ್ಳುವೆನು. ಇಲ್ಲಿರುವ ತನಕ ದಿನಾ ಬರುತ್ತೇನೆ" ಎಂದುಕೊಂಡು ಇಂದ್ರಸೇನನು ಬಹಳ ಕಷ್ಟಪಟ್ಟು ಆ ಶಿಖರವನ್ನು ತಲುಪಿದನು. ಅಲ್ಲಿ ನೋಡಿದಾಗ ಆ ಶಿಖರದಮೇಲೆ ಸಮತಳವಾದ ಪ್ರದೇಶವಿತ್ತು. ಅದರಮಧ್ಯೆ ಸಣ್ಣದೊಂದು ಕೊಳವಿತ್ತು. ಅದರಲ್ಲಿ ಬಿಳಿದಾವರೆಗಳಿದ್ದುವು. ಆ ಕೊಳದ ಸುತ್ತಲೂ ಕುಳಿತುಕೊಳ್ಳಲು ನುಣ್ಣನೆಯ ಬಂಡೆಗಳಿದ್ದುವು. ಆ ದೃಶ್ಯವನ್ನು ನೋಡಿದ ಇಂದ್ರಸೇನನು ಆನಂದಪರವಶನಾದನು. ಆದರೆ ಆತನು ಆ ಕೊಳದ ಪಕ್ಕದಲ್ಲಿ ಒಂದು ಬಂಡೆಯಮೇಲೆ ಕುಳಿತುಕೊಳ್ಳುತ್ತಿರಲು ಅವನಿಗೆ ಅಲ್ಲಿ ನಲುಗಿಹೋಗಿದ್ದ ಪುಷ್ಪಗಳು ಕಾಣಿಸಿದುವು.

ಅದನ್ನು ಕಂಡು ಇಂದ್ರಸೇನನಿಗೆ ಆಶ್ಚರ್ಯವಾಯಿತು. ಆ ಪುಷ್ಪಗಳು ಅಲ್ಲಿದ್ದ ಗಿಡಗಳದಲ್ಲ. ಯಾರೋ ಸ್ತ್ರೀಯ ಮುಡಿಯಿಂದ



ಜಾರಿಬಿದ್ದಿರಬೇಕು. ಆ ಸ್ತ್ರೀ ಇಲ್ಲಿಗೆ ಒಬ್ಬೊಂಟಿಗಳಾಗಿ ಬಂದು ಕುಳಿತುಕೊಳ್ಳುವಂತಿದೆ. ಆಕೆ ಇತರ ಸ್ತ್ರೀಯರಂತಲ್ಲ. ಇಂದ್ರಸೇನನಿಗೆ ಆಕೆ ಯಾರೋ ತಿಳಿಯದಿದ್ದರೂ ಆಕೆಯ ಮೇಲೆ ಒಂದು ರೀತಿ ಗೌರವಭಾವ ಜನಿಸಿತು.

ಆ ಸ್ತ್ರೀಯ ವಿಷಯವನ್ನು ತಿಳಿಯಲು ಇಂದ್ರಸೇನನಿಗೆ ಕುತೂಹಲವುಂಟಾಯಿತು. ಆಕೆ ಅಲ್ಲಿ ಯಾವುದನ್ನಾದರೂ ಮರೆತು ಹೋಗಿರಬಹುದೇನೋ ಎಂದು ಸುತ್ತಮುತ್ತ ನೋಡಿದನು. ಒಂದು ಶಿಲೆಯ ಪಕ್ಕದಲ್ಲಿ ಒಂದು ತಾಳೆ ಎಲೆ ಕಾಣಿಸಿತು. ಅದನ್ನು ಕೈಗೆ ತೆಗೆದುಕೊಂಡು ನೋಡಲು ಅದರಮೇಲೆ ಈ ರೀತಿ ಬರೆಯಲಾಗಿತ್ತು: "ಸ್ತ್ರೀಗೆ ಉತ್ತಮವಾದ ಪತಿ ಲಭಿಸುವುದೊಂದು ಮಹಾ ಪುಣ್ಯವಾಗಿದೆ. ಸಾಮಾನ್ಯವಾಗಿ ಪುರುಷರು ಸ್ವಾರ್ಥಪರರು. ಅಂತಲೇ ಅವರು ಸ್ತ್ರೀಯರ ತಿಳಿಗೇಡಿತನವನ್ನು ಸಹಿಸುವರು. ನನಗೆ ಎಂತಹ ಗಂಡ ಸಿಗುವನೋ ನೋಡಬೇಕು. ನನ್ನನ್ನು ಅರ್ಥಮಾಡಿಕೊಳ್ಳಲಾರದವನನ್ನು ವಿವಾಹವಾಗುವುದಕ್ಕಿಂತಲೂ ಆ ಜನ್ಮ ಕನ್ಯೆಯಾಗಿರುವುದೇ ಉತ್ತಮ"

ಇಂತಹ ತಾಳೆ ಎಲೆಗಳು ಇನ್ನೂ ಎರಡು ಮೂರು ಸಿಕ್ಕಿದುವು. ಅವುಗಳಮೇಲೂ ಇದೇ ರೀತಿಯ ಭಾವವನ್ನು ಸೂಚಿಸಿದ್ದಳು. ಆಕೆ ಆಗಾಗ್ಗೆ ಒಬ್ಬೊಂಟಿಗಳಾಗಿ ಬಂದು ತನ್ನ ಮನದಲ್ಲುದ್ಭವಿಸುವ ಅಭಿಪ್ರಾಯಗಳನ್ನು ತಾಳೆಗರಿಯಮೇಲೆ ಬರೆದು ಬಿಟ್ಟು ಹೋಗುವಳೆಂದು ಇಂದ್ರಸೇನನು ಗ್ರಹಿಸಿದನು.



ಯೋಚಿಸಿದಷ್ಟು ಅವನಿಗೆ ಆ ಸ್ತ್ರೀ ತನಗೆ ಪತ್ನಿಯಾಗಲು ಅರ್ಹಳೆಂದು ತೋರಿತು. ಆಕೆ ಮದುವೆಯ ವಯಸ್ಸಿನವಳೋ ಸುರೂಪಿಯೋ ಅಲ್ಲವೋ ಇಂದ್ರಸೇನನಿಗೆ ತಿಳಿಯದು. ಆಕೆ ತನ್ನ ಚೆಲುವನ್ನಾಗಲೀ, ತನ್ನ ಭಾವಿ ಪತಿಯ ಸೊಗಸನ್ನಾಗಲೀ ಕುರಿತು ತನ್ನ ಅಭಿಪ್ರಾಯ ವ್ಯಕ್ತಪಡಿಸಿರಲಿಲ್ಲ.

ಹೇಗಾದರೂ ಆ ಸ್ತ್ರೀಯನ್ನು ಭೇಟಿ ಮಾಡಬೇಕೆಂದು ಇಂದ್ರಸೇನನು ಬೆಟ್ಟವನ್ನಿಳಿದು ಚಂದ್ರವರ್ಮನ ಮನೆಗೆ ಹಿಂತಿರುಗಿದನು. ಚಂದ್ರವರ್ಮನ ಮನೆಯಲ್ಲಿ ಇಂದುಮುಖಿ, ವಾಸಂತಿ, ಭಾರತಿ, ಪದ್ಮಿನಿ, ಚಂದ್ರಕಳಾ ಮುಂತಾದವರು ಅನೇಕರಿದ್ದರು. ಅವರೆಲ್ಲ ಸ್ವೇಚ್ಛೆಯಾಗಿ ತಿರುಗಾಡುತ್ತಿದ್ದರು. ಯಾರು ಯಾವ ಕ್ಷಣದಲ್ಲಿ ಎಲ್ಲಿರುತ್ತಾರೆಯೋ ತಿಳಿಯುವುದು ಅಸಾಧ್ಯ. ಭೋಜನವೇಳೆಯಲ್ಲೂ ಸಹ ಎಲ್ಲರೂ ಒಟ್ಟಾಗಿ ಸೇರುತ್ತಿರಲಿಲ್ಲ. ತಮಗೆ ಬಿಡುವಾದಾಗ, ಇಷ್ಟಬಂದಾಗ ಊಟಮಾಡಿಕೊಂಡು ಹೋಗುತ್ತಿದ್ದರು.

ಇಂದ್ರಸೇನನು ಎಲ್ಲರೊಂದಿಗೂ ಮಾತನಾಡಿದನು. ಯಾರೊಬ್ಬರೂ ವಿಶೇಷ ಪ್ರಜ್ಞೆಯನ್ನು ತೋರಿಸಲಿಲ್ಲ. ಎಲ್ಲರೂ ಇತರ ಸ್ತ್ರೀಯರಂತೆ ಅಂದಚೆಂದಗಳನ್ನು ಕುರಿತು, ಬೆಡಗುಬಿನ್ನಾಣಗಳನ್ನು ಕುರಿತು, ತಮ್ಮ ದೊಡ್ಡಸ್ತಿಕೆಯನ್ನು ಕುರಿತು ಮಾತನಾಡಿದರು. ಅವರೊಂದಿಗೆ ಸಂಭಾಷಣೆ ನಡೆಸಿ ತನ್ನ ಊಹಾಸುಂದರಿಯನ್ನು ಕಂಡುಹಿಡಿಯಲು ಇಂದ್ರಸೇನನು ಅಶಕ್ತನಾದನು. ಒಮ್ಮೊಮ್ಮೆ





ಅವನಿಗೆ ತನ್ನ ಊಹಾಸುಂದರಿ ಈ ಸಮೂಹ ದಲ್ಲಿಲ್ಲವೆಂದು ತೋರುವುದು. ಆಕೆ ಸಾಮಾನ್ಯ ದಾಸಿಯಾದರೂ ಆಕೆಯನ್ನೇ ಮದುವೆಮಾಡಿ ಕೊಳ್ಳಬೇಕೆಂದು ದೃಢನಿಶ್ಚಯಿಸಿದನು.

ಆಕೆ ಬೆಟ್ಟದಮೇಲೆ ಹೋಗುವ ಸಮಯ ಕಾದು, ತಾನೂ ಆಗಲೇ ಹೋದರೆ ಆಕೆ ಯನ್ನು ಕಾಣಬಹುದೆಂದು ಇಂದ್ರಸೇನನು ಭಾವಿಸಿದನು. ಆದೇ ರೀತಿ ಇಂದ್ರಸೇನನು ಒಂದು ವಾರ ಬೇರೆ ಬೇರೆ ವೇಳೆಯಲ್ಲಿ ಬೆಟ್ಟ ವನ್ನು ಹತ್ತಿದನು. ಒಂದು ದಿನ ಬಂಡೆ ಯೊಂದರಮೇಲೆ ಚಿಕ್ಕ ತಾಳೆಗರಿಯಿತ್ತು. "ನನ್ನ ಪತ್ತೆಹಚ್ಚಲು ನನ್ನನ್ನು ಹಿಂಬಾಲಿಸ ಬೇಡಿ. ದೇವರು ನಿಮಗೆ ಬುದ್ಧಿ ಕೊಟ್ಟಿದ್ದಾನೆ. ಅದನ್ನು ಉಪಯೋಗಿಸಿ ನನ್ನನ್ನು ಗುರು ತಿಸಿರಿ" ಎಂದು ತಾಳೆಗರಿಯಮೇಲೆ ಬರೆದಿತ್ತು. ಇದನ್ನು ಕಂಡು ಇಂದ್ರಸೇನನು ಅಚ್ಚರಿ ಹೊಂದಿದನು. ತಾನು ಮಾಡುವ ಪ್ರತಿ ಕಾರ್ಯವನ್ನೂ ಆಕೆ ಗಮನಿಸುತ್ತಿರುವುದಾಗಿ ಸ್ಪಷ್ಟವಾಯಿತು. ಅಂದರೆ ಆಕೆಗೆ ತನ್ನಲ್ಲಿ ವಿಶೇಷ ಗೌರವಾಭಿಮಾನಗಳಿವೆ ಎಂದು ಖಚಿತವಾಯಿತು. ಆಕೆ ಏನು ತಿಳಿದುಕೊಳ್ಳು ವಳೋ ಎಂದು ಆಕೆಯನ್ನು ಹಿಂಬಾಲಿಸುವ ಯತ್ನವನ್ನು ಕೂಡಲೇ ನಿಲ್ಲಿಸಿದನು. ಯಥಾ ಪ್ರಕಾರ ಸಾಯಂಕಾಲದ ಹೊತ್ತು ಬೆಟ್ಟದ ಮೇಲೆ ಹೋಗಿ, ಸುಂದರವಾದ ಪುಷ್ಪಗಳನ್ನು ಒಂದು ಆಸನದಮೇಲಿಟ್ಟು ಬರಲಾರಂಭಿಸಿ ದನು. ಮೂರನೇಯ ದಿನ ಅವನು ಅಲ್ಲಿಗೆ ಹೋಗಿ ನೋಡಿದರೆ ತಾನಿಟ್ಟಿದ್ದ ಪುಷ್ಪಗಳಿರು ತ್ತಿರಲಿಲ್ಲ. ಅದಕ್ಕೆ ಪ್ರತಿಯಾಗಿ ಬೇರೆ ಬಗೆಯ ಪುಷ್ಪಗಳಿರುತ್ತಿದ್ದುವು.

ಒಂದು ದಿನ ಇಂದ್ರಸೇನನು ಒಂದು ಪತ್ರ ಬರೆದು ಅಲ್ಲಿಟ್ಟು ಬಂದನು. 'ನಿನ್ನನ್ನು ಪತ್ತೆ ಹಚ್ಚಲು ಯಾವ ಆಧಾರವೂ ಇಲ್ಲವಾಗಿದೆ. ನನಗೆ ತುಸ ಸಹಾಯ ಮಾಡಬಾರದೇ?' ಎಂದು ಆಕೆಯನ್ನು ಕೇಳಿಕೊಂಡಿದ್ದ.

"ಸಹಾಯಮಾಡಿದರೆ ನನ್ನನ್ನು ಸುಲಭ ವಾಗಿ ಕಂಡು ಹಿಡಿದುಬಿಡುವಿರಿ. ಅದಕ್ಕಿಂತಲೂ ನಾನೇ ಬಹಿರಂಗವಾಗಿ ನಿಮ್ಮಮುಂದೆ ಬರು ವುದು ಉತ್ತಮವಲ್ಲವೇ? ಆದರೆ ನನಗದು ಇಷ್ಟವಿಲ್ಲ. ನನ್ನ ಸಹಾಯವಿಲ್ಲದೆ ನೀವು ನನ್ನನ್ನು ಪತ್ತೆಹಚ್ಚಿದಾಗಲೇ ನೀವು ನನಗೆ ತಕ್ಕ



ಪತಿಯೆಂದು ರುಜುವಾತಾಗುವುದು'' ಎಂದು ಆಕೆ ಸಮಾಧಾನಕೊಟ್ಟು ಪತ್ರಬರೆದಳು.

ಹೀಗೆ ಮೂರು ವಾರಗಳು ಕಳೆದುವು. ಆ ಸ್ತ್ರೀ ಮಟಮಟ ಮಧ್ಯಾಹ್ನದವೇಳೆ, ಎಲ್ಲರೂ ಊಟಕ್ಕೆ ಕುಳಿತಿರುವ ಸಮಯದಲ್ಲಿ ಬೆಟ್ಟದ ಮೇಲೆ ಹೋಗುವಳೆಂದು ಇಂದ್ರಸೇನನು ಮೊದಲೇ ಊಹಿಸಿದ್ದನು. ಇನ್ನು ತನಗೆ ಒಂದು ವಾರಮಾತ್ರ ವ್ಯವಧಿಯಿತ್ತು. ಆದುದರಿಂದ ಆಕೆಯನ್ನು ಒಂದು ಮಧ್ಯಾಹ್ನ ಬೆಟ್ಟದ ಮೇಲೆ ಭೇಟಿಮಾಡಲು ನಿರ್ಧರಿಸಿದನು.

ಆತನು ಬೆಟ್ಟದಮೇಲೆ ಹೋಗುವವೇಳೆಗೆ ಶ್ವೇತಾಂಬರ ಧರಿಸಿದ್ದ ಸ್ತ್ರೀರೂಪವೊಂದು ಶಿಖರದತ್ತ ತೆವಳಿಕೊಂಡು ಹೋಗುತ್ತಿರುವುದು ಕಾಣಿಸಿತು. ಇಂದ್ರಸೇನನು ಆತುರಾತುರ ದಿಂದ ಶಿಖರವನ್ನು ಸೇರಲು ಯತ್ನಿಸಿದನು. ಆದರೆ ನಡುದಾರಿಯಲ್ಲಿ ಕಾಲುಜಾರಿ ಕೆಳ ಗುರುಳಿದನು. ಅವನ ಕಾಲು ಉಳುಕಿತು. ತಲೆ ಎತ್ತಿ ನೋಡಲು ಆ ಸ್ತ್ರೀಯ ಸುಳಿವು ಕಾಣಿಸಲಿಲ್ಲ. ಅವನು ನೋವಿನಿಂದ ಕುಂಟುತ್ತಾ ಬರುತ್ತಿದ್ದನು. ಅರ್ಧದಾರಿಯಲ್ಲಿ ಒಬ್ಬ ಅಶ್ವಿಕನು ಎದುರಾಗಿ "ಸ್ವಾಮಿ, ಇದರ ಮೇಲೆ ಹತ್ತಿ ಕುಳಿತು ಕೊಳ್ಳಿ. ಮನೆಗೆ ಕರೆದು ಕೊಂಡು ಹೋಗುತ್ತೇನೆ'' ಎಂದ.

"ನನ್ನ ಕಾಲು ಉಳುಕಿದ ವಿಷಯ ನಿನಗೆ ಹೇಗೆ ತಿಳಿಯಿತು?'' ಎಂದು ಇಂದ್ರಸೇನನು ಆ ರಾಹುತನನ್ನು ಕೇಳಿದನು. "ಆಕೆ ಹೇಳಿ ನನ್ನನ್ನು ಇಲ್ಲಿಗೆ ಕಳುಹಿಸಿದರು'' ಎಂದು




ಪ್ರತ್ಯುತ್ತರಕೊಟ್ಟ ರಾಹುತ. "ಯಾರು? ಯಾರಾಕೆ? ಆಕೆಯ ಹೆಸರೇನು? ಹೇಗಿರು ತ್ತಾರೆ? ಎತ್ತರವೋ, ಕುಳ್ಳೋ?'' ಎಂದು ಇಂದ್ರಸೇನನು ಅನೇಕ ಪ್ರಶ್ನೆಗಳನ್ನು ಹಾಕಿ ದನು. ಆದರೆ ಆ ರಾಹುತನು ಯಾವ ಉತ್ತರವನ್ನೂ ಹೇಳದೆ ಮೌನವಹಿಸಿದನು. ಅವನೊಬ್ಬ ಹುಂಬ!

ಇಂದ್ರಸೇನನು ಮನೆ ಸೇರಿದಕೂಡಲೇ ಎಲ್ಲರೂ ಬಂದು ತಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸಿದರು. ಅವನು ಎಲ್ಲರನ್ನೂ ಅತಿ ಶ್ರದ್ಧೆಯಿಂದ ಗಮನಿಸಿ ನೋಡಿದನು. ಇಂದು ಮುಖಿ ಎಂಬ ಕನ್ಯೆ ತನ್ನೆಡೆಗೆ ಪ್ರತ್ಯೇಕವಾಗಿ ಮರುಕತೋರಿಸಿದಂತೆ ತೋರಿತು. ಆಕೆ ತುಂಬಾ ಸುಂದರಿಯೂ ಹೌದು. ಆಕೆ



ಬಂದಾಗ ಸಂಗಡ ಯಾರೂ ಇರಲಿಲ್ಲ. ಅದರಿಂದ ಅವನು ಆಕೆಯೊಂದಿಗೆ'' ನನಗೆಲ್ಲ ಅರ್ಥವಾಯಿತು. ನೀನು ಕೊಟ್ಟ ಪುಷ್ಪಗಳು, ಪತ್ರಗಳು...'' ಎಂದು ಪ್ರಾರಂಭಿಸಿದನು.

ಅಕಸ್ಮಾತ್ತಾಗಿ ಇಂದುಮುಖಿಯ ಮುಖ ಭಯದಿಂದ ಬೆಮರಿತು. ಆಕೆ ಏನೋ ಹೇಳಲು ಪ್ರಯತ್ನಿಸಿದಳು. ಆದರೆ ತುಟಿಕಚ್ಚಿಕೊಂಡು ಒಮ್ಮೆಗೆ ಅಲ್ಲಿಂದ ಓಡಿದಳು. ತರುವಾಯ ಚಂದ್ರಕಳೆ ಎಂಬ ತರುಣಿ ಬಂದು, ಇಂದ್ರಸೇನನೊಂದಿಗೆ 'ನಮ್ಮ ಇಂದುಮುಖಿ ಮಂತ್ರಿಕುಮಾರನನ್ನು ಪ್ರೇಮಿಸುತ್ತಿರುವ ವಿಷಯ ನಿಮಗೆ ತಿಳಿದಿರುವುದಂತೆ. ದಯವಿಟ್ಟು ಕೊಂಚದಿನ ಆ ವಿಷಯ ರಹಸ್ಯವಾಗಿಡಬೇಕೆಂದು ನಮ್ಮ ಪ್ರಾರ್ಥನೆ''



ಎಂದಳು ಕಂಪಿತಕಂಠದಿಂದ. ಇದನ್ನು ಕೇಳಿ ಇಂದ್ರಸೇನನು ನಿರ್ವಿಣ್ಣನಾದನು. ತನ್ನ ಊಹಾಸುಂದರಿ ಇಂದುಮುಖಿಯಲ್ಲ. ಮತ್ತೆ ಯಾರು? ಆತನಿಗೆ ದಿಕ್ಕೇತೋರಲಿಲ್ಲ. ಅಂದು ರಾತ್ರಿ ಅವನು ನಿದ್ರೆಮಾಡುತ್ತಿದ್ದಸಮಯದಲ್ಲಿ ದಿಂಬಿನಮೇಲೆ ಯಾರೋ ಒಂದು ಪತ್ರವನ್ನಿಟ್ಟರು. ಮಾರನೇಯದಿನ ಬೆಳಗ್ಗೆ ಎದ್ದ ಕೂಡಲೇ ಅವನು ಆ ಪತ್ರವನ್ನು ಕಂಡು ಚಕಿತನಾದನು. ಆ ಪತ್ರದಲ್ಲಿ ಹೀಗಿತ್ತು: "ನನ್ನಿಂದಾಗಿ ನಿಮ್ಮ ಕಾಲು ಉಳುಕಿದುದನ್ನು ಕಂಡು ನನಗೆ ನಿಮ್ಮಮೇಲೆ ತುಂಬಾ ಮರುಕವಾಯಿತು. ನನ್ನ ಅಜ್ಞಾತವಾಸದಿಂದ ಹೊರಬೀಳಲೂ ಒಮ್ಮೆ ನಿರ್ಧರಿಸಿದೆ. ಆದರೆ ನನ್ನ ವಿಷಯವನ್ನು ಬದಲಾಯಿಸುವಂತಿಲ್ಲ. ನೀವಾಗಿ ನನ್ನನ್ನು ಕಂಡುಕೊಂಡಹೊರತು ನಾವು ವಿವಾಹವಾಗುವುದು ನಿರುಪಯೋಗ''

ಇಂದ್ರಸೇನನು ಹತಾಶನಾದ. ಆ ಮನೆಯಲ್ಲಿದ್ದ ಕನ್ಯೆಯರೊಂದಿಗೆಲ್ಲಾ ಅವನು ಸಂಭಾಷಣೆ ನಡೆಸಿದ್ದ. ಒಬ್ಬರಾದರೂ ಪ್ರತಿಭೆಯನ್ನು ತೋರಿಸಲಿಲ್ಲ. ಯಾರನ್ನು ಮಾತನಾಡಿಸಿದರೂ ಅಲ್ಪವಿಷಯಗಳು ಕ್ಷುದ್ರವಿಷಯಗಳನ್ನು ಪ್ರಸ್ತಾಪಿಸುತ್ತಿದ್ದರು. ಒಬ್ಬರಿಗೂ ಉನ್ನತ, ಉದಾತ್ತ ಅಭಿರುಚಿಗಳಿರಲಿಲ್ಲ. ಅವರೊಂದಿಗೆ ಅವನು ತುಂಬಾ ಸಹನೆಯಿಂದ ಸಂಭಾಷಣೆ ನಡೆಸಿದನು. ಮಾತಿನ ನಡುವೆ ಇನಿತಿಷ್ಟಾದರೂ ಅವಕಾಶಸಿಕ್ಕಿದರೆ ತನ್ನ ಊಹಾಸುಂದರಿಯ ಪತ್ತೆಹಚ್ಚಲು ಅತಿ



ಶ್ರದ್ಧೆಯಿಂದ ಅವರ ಕಾಡುಹರಟೆಯನ್ನು ಕೇಳುತ್ತಾ ಕುಳಿತನು. ಆದರೆ ಕೊಂಚ ವಾದರೂ ಪ್ರಯೋಜನವಾಗಲಿಲ್ಲ.

ಎರಡು ಮೂರು ದಿನಗಳನಂತರ ಅವನ ಕಾಲು ಗುಣಹೊಂದಿತು. ತರುವಾಯ ಅವರು ನಗರಕ್ಕೆ ಹಿಂತಿರುಗುವ ಸಮಯ ಬಂದಿತು. ಅವನು ಹೊರಟುನಿಂತ ದಿನ ಮತ್ತೊಂದು ಪತ್ರ ಬಂದಿತು. ಅದರಲ್ಲಿ ಈ ರೀತಿ ಇತ್ತು :

ನೀವು ಕೊನೆಗೂ ನನ್ನನ್ನು ಗುರುತಿಸ ಲಾರದೆಹೋದಿರಿ. ನಾನಿಟ್ಟ ಒಂದು ಪರೀಕ್ಷೆ ಯಲ್ಲಾದರೂ ಜಯಪಡೆಯಲಿಲ್ಲ. ನಾನು ನಿಮ್ಮ ಮುಂದೆ ಓಡಾಡಿ ಕೊಂಡಿರಲಿಲ್ಲವೆಂದು ಭಾವಿಸಬೇಡಿ. ನಾವಿಬ್ಬರೂ ಅನೇಕಸಾರಿ ಕಂಡಿದ್ದೇವೆ, ಹರಟೆ ಹೊಡೆದಿದ್ದೇವೆ. ನನ್ನನ್ನು ತಿಳಿಯಲು ಅನೇಕವಿಧವಾದ ಪ್ರಯತ್ನಗಳನ್ನು ಮಾಡಿದಿರಿ. ಆದರೆ ನಾನು ಮಾಡುವಿರೆಂದು ಆಶಿಸಿದ್ದ ಒಂದು ಪ್ರಯತ್ನವನ್ನು ಮಾಡಲಿಲ್ಲ. ನಾನು ನಿರಾಶೆ ಹೊಂದಿದೆ. ಅಪ್ಪಣೆ ಕೊಡಿ''.

ಇಂದ್ರಸೇನನಿಗೆ ಆಶಾಭಂಗವಾಯಿತು. ಅವನು ಅಂದೇ ಚಂದ್ರವರ್ಮನೊಂದಿಗೆ ನಗರಕ್ಕೆ ಹೊರಟುಹೋದನು. ತನ್ನ ಊಹಾ ಸುಂದರಿ ಯಾರೋ ಅವನಿಗೆ ತಿಳಿಯಲೇ ಇಲ್ಲ.

ಬೇತಾಳ ಈ ಕಥೆ ಹೇಳಿ " ರಾಜನೇ, ನನಗೊಂದು ಸಂದೇಹ. ಇಂದ್ರಸೇನನ ಊಹಾಸುಂದರಿ ಅಜ್ಞಾತವಾಸದಿಂದ ಹೊರ ಬೀಳದಿರಲು ಕಾರಣವೇನು? ಬೇಡವೆಂದರೂ ತನ್ನನ್ನು ಇಂದ್ರಸೇನನು ಹಿಂಬಾಲಿಸಿದ ನೆಂತಲೇ? ಇಲ್ಲ ಆಕೆಗೆ ಅವನಮೇಲೆ ಸಾಕಷ್ಟು



ಪ್ರೇಮವಿರಲಿಲ್ಲವೆ? ತನ್ನನ್ನು ಗುರ್ತಿಸಲು ಆತನು ಒಂದು ಪ್ರಯತ್ನವನ್ನು ಮಾಡಲಿಲ್ಲವೆಂದು ಆಕೆ ಆಕ್ಷೇಪಿಸಿದಳಷ್ಟೆ? ಆ ಪ್ರಯತ್ನ ಯಾವುದು? ಈ ಸಂದೇಹಗಳಿಗೆ ವಿವರ ತಿಳಿದಿದ್ದರೂ ಸಹ ಹೇಳದೆಹೋದರೆ ನಿನ್ನ ತಲೆ ಸಾವಿರ ಹೋಳಾದೀತು" ಎಂದಿತು.

"ನೀನು ಮೊದಲು ಹೇಳಿದ ಸಂದೇಹಗಳು ಸರಿಯಾದುವಲ್ಲ. ತನ್ನನ್ನು ಹಿಂಬಾಲಿಸಿದನೆಂದು ಆಕೆ ಆಗ್ರಹಗೊಂಡಿದ್ದರೆ, ಅವನ ಕಾಲು ಉಳುಕಿದಾಗ ಆಕೆ ಅವನನ್ನು ವಿಚಾರಿಸಲು ಬರುತ್ತಿರಲಿಲ್ಲ. ಆಗ ಆಕೆಯನ್ನು ಸುಲಭವಾಗಿ ಕಂಡುಹಿಡಿಯಬಹುದಿತ್ತು. ಇಂದ್ರಸೇನನು ತನಗೆ ಗಂಡನಾಗಬೇಕೆಂಬ ಕೋರಿಕೆ ಆಕೆಗೆ ಇಲ್ಲದಿದ್ದರೆ, ಅವನು ಅಲ್ಲಿದ್ದಷ್ಟು ಕಾಲ ಬೆಟ್ಟದಮೇಲೆ ಹೋಗುತ್ತಿರಲಿಲ್ಲ. ಆಗ ಇಂದ್ರಸೇನನಿಗೆ ನಿರಾಶೆಯೂ ಆಗುತ್ತಿರಲಿಲ್ಲ. ಆ ಕಾಗದದಲ್ಲಿ ಹೇಳಿದ್ದಂತೆ ಆಕೆಯನ್ನು ಗುರ್ತುಹಿಡಿಯಲು ಒಂದು ಪ್ರಯತ್ನಮಾಡಲಿಲ್ಲ. ಆ ಪ್ರಯತ್ನವೇನೋ ನಾವು ಸುಲಭವಾಗಿ ಊಹಿಸಬಹುದು. ಪುರುಷರು ಸ್ವಾರ್ಥಪರರೆಂದೂ, ಅಂತಲೇ ಅವರು ಸ್ತ್ರೀಯರ ಬುದ್ಧಿಹೀನತೆಯನ್ನು ಸಹಿಸುವರೆಂದೂ ಆಕೆ ಭಾವಿಸಿದ್ದಳು. ಅವನು ಚಂದ್ರವರ್ಮನ ಮನೆಯಲ್ಲಿ ಎಲ್ಲ ಕನ್ಯೆಯರೊಂದಿಗೆ ಮಾತನಾಡುತ್ತಿದ್ದಾಗ ಅವರ ತಿಳಿಗೇಡಿ ಸಂಭಾಷಣೆಯನ್ನು ಸಹಿಸಿಕೊಂಡನೇ ಹೊರತು ಅಸಹ್ಯಪಟ್ಟುಕೊಳ್ಳಲಿಲ್ಲ. ಅವನನ್ನು ಪರೀಕ್ಷಿಸಲೋಸುಗ ಊಹಾಸುಂದರಿ ಸಹ ಇತರರಂತೆ ಮಾತನಾಡಿದಳು. ಇಂದ್ರಸೇನನು ಸ್ವಾರ್ಥಪರನಾದುದರಿಂದ ತನ್ನೊಂದಿಗೆ ಮಾತನಾಡುತ್ತಿದ್ದ ಸ್ತ್ರೀಯರ ತಿಳಿಗೇಡಿತನವನ್ನು ಸಹಿಸುತ್ತಿದ್ದನು. ಒಂದುವೇಳೆ ಊಹಾಸುಂದರಿಗೆ ಕೋಪ ಬರುವುದೇನೋ ಎಂದು ಆತನು ಭಯಭೀತನಾದನು. ಇದು ಎಲ್ಲ ಪುರುಷರೂ ಮಾಡುವ ಕೆಲಸ. ಆದ್ದರಿಂದಲೇ ಅವನು ಊಹಾಸುಂದರಿಯನ್ನು ಕಳೆದುಕೊಂಡನು" ಎಂದು ತ್ರಿವಿಕ್ರಮನು ಹೇಳಿದನು.

ರಾಜನಿಗೆ ಈ ರೀತಿ ಮೌನಭಂಗವಾದ ಕೂಡಲೇ ಬೇತಾಳ ಮಾಯವಾಗಿ ಶವದೊಂದಿಗೆ ಮರವೇರಿಕೊಂಡಿತು.



# ಮೂರ್ಖರಲ್ಲಿ ಮೂರ್ಖರು

ಹಿಂದೆ ಬೆಂಗಳೂರಿನಲ್ಲಿ ರಮಣಾರೆಡ್ಡಿ ಗೋಪಾಲರೆಡ್ಡಿ ಎಂಬಿಬ್ಬರು ಶುಂಠರಿದ್ದರು. ಅವರಿಬ್ಬರೂ ಒಳ್ಳೆಯದುಸ್ತು ಹಾಕಿಕೊಂಡು ಯಾವಾಗಲೂ ಒಟ್ಟೊಟ್ಟಿಗೇ ನಡೆದಾಡುತಿದ್ದರು.

ಆಗ ಆಂಗ್ಲೇಯರು ತಮ್ಮ ಪ್ರಭಾವವನ್ನು ಪ್ರಾರಂಭಿಸಿದ್ದ ಕಾಲವಾಗಿತ್ತು. ಒಂದುದಿನ ಬೆಳಗ್ಗೆ ನಮ್ಮ ರೆಡ್ಡಿಗಳಿಬ್ಬರೂ ಮೈದಾನದಲ್ಲಿ ತಿರುಗಾಡುವಾಗ, ಆಂಗ್ಲ ದೊರೆಯೊಬ್ಬ ಇದಿರಾದ. ಅವನು ಸಮೀಪಿಸಿದಾಗ ಈ ಶುಂಠರೆಡ್ಡಿಗಳು ಕೂಡಲೇ ಆತನಿಗೆ ಕೈ ಮುಗಿದರು. ಆತ ತಮ್ಮ ಪದ್ಧತಿಯಂತೆ "ಗುಡ್‌ಮೋರ್ನಿಂಗ್" ಎಂದು ಹೇಳಿ ಆಚೆಗೆಹೋದ.

ರಮಣಾರೆಡ್ಡಿ ಗೋಪಾಲರೆಡ್ಡಿಗಳು ಮಿಕಿಮಿಕಿ ಮುಖಮುಖ ನೋಡಿಕೊಂಡು, "ಏನಂದ ಆತ?" ಎಂದುಕೊಂಡರು. "ನಿನಗೆ ಗುಡ್ಡದಂಥ ಮೋರೆ ಅಂದ" ಎಂದ ರಮಣಾರೆಡ್ಡಿ. "ಉಹುಂ, ನಿನಗೇ ಗುಡ್ಡದಂಥ ಮೋರೆ ಅಂದ" ಎಂದ ಗೊಪಾಲರೆಡ್ಡಿ.

"ನಿನಗೆ ಗುಡ್ಡದಮೋರೆ, ನಿನಗೆ ಗುಡ್ಡದಮೋರೆ" ಎಂದುಕೊಂಡು ಅವರವರೊಳಗೆ ವಾಗ್ವಾದಬಲವಾಯಿತು. "ಆತ ನಿನಗೇ ಹೇಳಿದ್ದು" "ಅಲ್ಲ ನಿನಗೇ ಹೇಳಿದ್ದು" ಎಂದು ಹೇಳಿಕೊಂಡು ಪರಸ್ಪರ ಗುದ್ದಾಡಿಕೊಂಡರು. ಮೂಗಿಗೂ ಮೋರೆಗೂ ತಲೆಗೂ ಗುದ್ದಿಕೊಂಡರು. ಬಹಳಹೊತ್ತು ನಡೆಯಿತು ಅವರ ಜಗಳ.

ಜನರು ಗುಂಪುಗೂಡಿ ಅವರಿಬ್ಬರನ್ನೂ ಬಿಡಿಸಿ, "ಏನು ವಿಷಯ?" ಎಂದು ಕೇಳಿದರು. "ದೊರೆ ಇವನನ್ನು ನೋಡಿ ಗುಡ್ಡೇಮೋರೆನಿಂಗೆ, ಅಂದ" ಎಂದ ರಮಣಾರೆಡ್ಡಿ. "ನನಗಲ್ಲ, ಇವನಿಗೇ ದೊರೆ ಹಾಗೆ ಹೇಳಿದ್ದು" ಎಂದ ಗೋಪಾಲರೆಡ್ಡಿ.

ಕೂಡಲೇ ಒಬ್ಬ ಬುದ್ಧಿವಂತ ಮುಂದೆಬಂದು, "ದೊರೆ ಹೇಳಿದ್ದು ನಿಮ್ಮಲ್ಲಿ ಒಬ್ಬನಿಗಲ್ಲ; ಇಬ್ಬರಿಗೂ ಗುಡ್ಡೇಮೋರೆ ನಿಮಗೆ ಅಂದಿದ್ದಾನೆ. ಅದು ಒಬ್ಬನಿಗೇ ಅಂದ ಹಾಗೆ ನಿಮ್ಮ ಕಿವಿಗೆಬಿತ್ತು. ಬೇಕಾದರೆ ನಿಮ್ಮಿಬ್ಬರ ಮೋರೇನೂ ನೋಡಿಕೊಳ್ಳಿ" ಎಂದು ಒಂದು ಕನ್ನಡಿಯನ್ನು ಇಬ್ಬರಿಗೂ ತೋರಿಸಿದ. ಮೊದಲೇ ಗಂಟು ಮೋರೆಯವರಾದ ಇಬ್ಬರ ಮುಖವೂ, ಗುದ್ದಿನ ಬಾಪುಗಳಿಂದ ಈಗ ಅಲ್ಲಲ್ಲಿ ಉಬ್ಬಿಕೊಂಡಿತ್ತು! ಇದನ್ನು ನೋಡಿ ಇಬ್ಬರು ಮೂರ್ಖರಿಗೂ ಸಮಾಧಾನವಾಯಿತು!

—ಬಾಲಕೃಷ್ಣ ಕಿ. ನ.



# ವಿಪರೀತ ಬುದ್ಧಿ

**ಯಾ**ತ್ರಿಕನೊಬ್ಬನು ಒಂದು ಅಡವಿಮಾರ್ಗದಲ್ಲಿ ಹೋಗುತ್ತಿರಲು ಮಧ್ಯದಾರಿಯಲ್ಲಿ ಕತ್ತಲಾಯಿತು. ಆಗ ಚಳಿಗಾಲ.

ಆ ಚಳಿ ಮತ್ತು ಕಾರ್ಗತ್ತಲೆಯಲ್ಲಿ ನಿರ್ಮಾನುಷ್ಯವಾದ ಕಾಡಿನಲ್ಲಿ ಮತ್ತೆಷ್ಟು ದೂರ ನಡೆಯಬೇಕೋ ಎಂದುಕೊಂಡು ಆ ಪ್ರವಾಸಿಗನು ಹೆದರುತ್ತಿರಲು, ತುಸ ದೂರದಲ್ಲಿ ಅವನಿಗೊಂದು ಕುಟೀರ ಕಾಣಿಸಿತು.

ಬದುಕಿದೆಯಾ ಬಡಜೀವ ಎಂದುಕೊಂಡು ಯಾತ್ರಿಕನು ಆ ಕುಟೀರವನ್ನು ಪ್ರವೇಶಿಸಿದನು. ಕುಟೀರದಲ್ಲಿ ಮಧ್ಯವಯಸ್ಸಿನವನಾದ ಗೃಹಸ್ಥನೊಬ್ಬನು ಅಡಿಗೆಮಾಡಿಕೊಳ್ಳುತ್ತಿದ್ದನು. ಆ ಕುಟೀರದಲ್ಲಿ ಅವನಹೊರತು ಮತ್ತೆ ಯಾರೂ ಕಾಣಿಸಲಿಲ್ಲ. ಮೂಲೆಯೊಂದರಲ್ಲಿ ಬೆಕ್ಕೊಂದು ಅಲುಗಾಡದೆ ಮಲಗಿತ್ತು.

"ಅಯ್ಯಾ, ನಾನು ಪರಸ್ಥಳದವನು. ಬಹಳ ದೂರದಿಂದ ಬಂದಿದ್ದೇನೆ. ಈ ಕತ್ತಲೆಯಲ್ಲಿ ಈ ಅರಣ್ಯಮಧ್ಯೆ ಸಿಕ್ಕಿಬಿದ್ದೆ. ಈ ರಾತ್ರಿ ನನಗಿಷ್ಟು ತಿಂಡಿ ಕೊಟ್ಟು, ಮಲಗಿಕೊಳ್ಳಲು ಸ್ಥಳವಿತ್ತರೆ ನಿಮ್ಮ ಉಪಕಾರ ಮರೆಯಲಾರೆ" ಎಂದ ಯಾತ್ರಿಕ.

ಅಭ್ಯಂತರವಿಲ್ಲ. ಈ ರಾತ್ರಿ ನನ್ನ ಅತಿಥಿಯಾಗಿರು. ಇಲ್ಲೇ ಮಲಗಿಕೊ. ಆದರೆ ನನ್ನದೊಂದು ಷರತ್ತಿದೆ. ನಮ್ಮ ಮನೆಗೆ ಅತಿಥಿಯಾಗಿ ಬಂದವರು ನಾನು ಕೇಳುವ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಕೊಡಬೇಕು. ಇಲ್ಲದಿದ್ದರೆ ಕಪಾಲಮೋಕ್ಷವಾಗುವುದು. ಈ ಕಟ್ಟಳೆಗೆ ಸಮ್ಮತಿಸುವುದಾದರೆ ಇರಿ. ಇಲ್ಲ ಈಗಿಂದೀಗಲೇ ಹೊರಡಿ" ಎಂದು ಹೇಳಿದನು ಆ ಗೃಹಸ್ಥ.

ಈ ಗೃಹಸ್ಥನೆಲ್ಲೋ ಹುಂಬನಿರಬೇಕೆಂದು ಯಾತ್ರಿಕನು ಗ್ರಹಿಸಿದನು. ಆದರೆ ಬೆಚ್ಚಗೆ ಒಲೆಯಮುಂದೆ ಕುಳಿತುಕೊಳ್ಳುವ ಅಪೇಕ್ಷೆ ತೀವ್ರವಾಯಿತು. ಚಳಿಯಲ್ಲಿ ಹೊರಗೆ ಕಾಲಿಡಲು ಮನಸ್ಸುಬರಲಿಲ್ಲ.

'ಈ ಹುಂಬನು ಕೇಳುವ ಪ್ರಶ್ನೆಗಳಿಗೆ ಜವಾಬು ಕೊಡುವುದೊಂದು ಕಷ್ಟವೇ?' ಎಂದುಕೊಂಡು ಆತ್ಮವಿಶ್ವಾಸದಿಂದ ಅದಕ್ಕೆ

ಮಾಲತೀಮಾಧವಯ್ಯ

ಒಪ್ಪಿಕೊಂಡ ಯಾತ್ರಿಕ. "ಹಾಗಾದರೆ ಬಾಗಿಲು ಮುಚ್ಚಿ ಒಳಗೆ ಬಂದು ವೈಕಾಯಿಸಿಕೊ. ಇನ್ನೇನು ಸ್ವಲ್ಪಹೊತ್ತಿಗೆ ಅಡಿಗೆ ಸಿದ್ಧವಾಗುವುದು. ಇಬ್ಬರೂ ಒಟ್ಟಿಗೆ ಕುಳಿತು ಊಟಮಾಡೋಣ" ಎಂದ ಗೃಹಸ್ಥ.

ಕೊಂಚಹೊತ್ತಿಗೆ ಅಡಿಗೆ ಮುಗಿಯಿತು. ಎಲೆಹಾಕಿ ಇಬ್ಬರಿಗೂ ಅನ್ನ ಬಡಿಸಿದ. ಇಬ್ಬರೂ ಹೊಟ್ಟೆತುಂಬಾ ಊಟಮಾಡಿದರು. ಊಟವಾದನಂತರ ಇಬ್ಬರೂ ಮಾತನಾಡಲು ಒಂದುಕಡೆ ಕುಳಿತುಕೊಂಡರು.

ಮಾತಿನನಡುವೆ ಗೃಹಸ್ಥನು ಮೂಲೆಯಲ್ಲಿದ್ದ ಬೆಕ್ಕನ್ನು ತನ್ನ ಅತಿಥಿಗೆ ತೋರಿಸಿ "ಅದೇನದು?" ಎಂದು ಕೇಳಿದನು. ಈ ಗೃಹಸ್ಥನು ಸಣ್ಣಮಕ್ಕಳು ಕೇಳುವಂತಹ ಪ್ರಶ್ನೆ ಕೇಳಲು, ಯಾತ್ರಿಕನಿಗೆ ಆಶ್ಚರ್ಯವಾಯಿತು. ಕೂಡಲೇ ಅವನು "ಅದು ಬೆಕ್ಕಲ್ಲವೇ?" ಎಂದನು.

"ಅಲ್ಲ. ಶುಚಿತ್ವ" ಎಂದು ಹೇಳಿ ಗೃಹಸ್ಥನು ತನ್ನ ಅತಿಥಿಯ ಕಪಾಲಕ್ಕೆ ಪಟಾರನೆ ಒಂದು ಏಟು ಕೊಟ್ಟನು. ಅವನ ಈ ಬಗೆಯ ವಿಚಿತ್ರವರ್ತನೆ ಕಂಡು ಯಾತ್ರಿಕನು ವಿಸ್ಮಿತನಾದನು.

ನಂತರ ಗೃಹಸ್ಥನು ನೀರಿನ ಮಡಿಕೆಯನ್ನು ತೋರಿಸಿ "ಅದರಲ್ಲೇನಿದೆ?" ಎಂದನು.

"ನೀರು" ಎಂದು ತಟಕ್ಕನೆ ಉತ್ತರ ಹೇಳಿದ ಯಾತ್ರಿಕ.

"ಅಲ್ಲ. ಅದರಲ್ಲಿ ಸುಗುಣವಿದೆ" ಎಂದು ಹೇಳಿ ಗೃಹಸ್ಥನು ಮತ್ತೆ ಕಪಾಳಕ್ಕೆ ಬಿಗಿದ.



ಕೊಂಚಹೊತ್ತಿನನಂತರ "ಆ ಒಲೆ ಯಲ್ಲೇನಿದೆ?" ಎಂದು ಕೇಳಿದ ಗೃಹಸ್ಥ.

"ಬೆಂಕಿ" ಯಾತ್ರಿಕನು ಹೇಳಿದ.

"ಅಲ್ಲ. ಸೌಖ್ಯ!" ಎಂದ ಗೃಹಸ್ಥ. ತಪ್ಪು ಹೇಳಲು ಮತ್ತೆ ಅಥಿಯ ಕಪಾಳಕ್ಕೆ ಏಟು ಬಿತ್ತು. ಈ ಸಾರಿ ಗೃಹಸ್ಥನು ಮನೆಯ ಮಾಡನ್ನು ಯಾತ್ರಿಕನಿಗೆ ತೋರಿಸಿ "ಅದೇ ನದು?" ಎಂದು ಕೇಳಿದ.

"ಮಾಡು" ಎಂದು ಯಾತ್ರಿಕನು ಸಮಾಧಾನ ಹೇಳಿದ; ಮತ್ತೆ ಏಟುಬೀಳುವುದು ಖಂಡಿತವೆಂದು ಅರಿತು.

"ಅಲ್ಲ. ಎತ್ತು" ಮತ್ತೆ ಯಾತ್ರಿಕನ ಕಪಾಳಕ್ಕೆ ಬಿತ್ತು ಏಟು.

ಯಾತ್ರಿಕನು ಎದ್ದು ನಿಂತು "ನನ್ನ ತಲೆ ಸಿಡಿಯುತ್ತಿದೆ. ಸ್ವಲ್ಪ ಹೊರಗೆ ಅಡ್ಡಾಡಿಕೊಂಡು ಬರುತ್ತೇನೆ" ಎಂದು ಹೇಳಿ ಬಾಗಿಲು ತೆಗೆದು ನಾಲಗೆ ಚಪ್ಪರಿಸಿಕೊಂಡು ಹೊರಗೆ ಹೋದ. ಮೂಲೆಯಲ್ಲಿ ಮಲಗಿದ್ದ ಬೆಕ್ಕು, ಮೈಮುರಿದು ಮೆಲ್ಲನೆ ಅವನ ಹಿಂದೆ ಹೊರಟಿತು. ಯಾತ್ರಿಕನು ಬೆಕ್ಕನ್ನು ಹಿಡಿದುಕೊಂಡು, ಅದರ ಬಾಲಕ್ಕೆ ಬಟ್ಟೆಸುತ್ತಿ, ಬೆಂಕಿ ಹಚ್ಚಿ, ಬೆಕ್ಕನ್ನು ಮಾಡಿನಮೇಲಕ್ಕೆ ಅಟ್ಟಿದ.

ತರುವಾಯ ಅವನು ಒಳಗೆ ಹೋಗಿ ಗೃಹಸ್ಥನೊಂದಿಗೆ "ಅಯ್ಯಾ, ಏಳಿಯೇಳಿ! ನಿಮ್ಮ ಶುಚಿತ್ವ ಸೌಖ್ಯವನ್ನು ಎತ್ತಿಕೊಂಡು ಹೋಯಿತು. ತಡಮಾಡದೆ ಸುಗುಣದಿಂದ ಸೌಖ್ಯವನ್ನು ತಡೆಯಿರಿ" ಎಂದ.

ಗೃಹಸ್ಥನು ಸಿಡಿಮಿಡಿಗೊಂಡು ಹುಬ್ಬು ಗಂಟಿಕ್ಕಿ "ಏನಯ್ಯಾ ನೀನು ಹೇಳುವುದು? ಆ ಅರ್ಥಪರ್ಥವಿಲ್ಲದ ಹರಟೆ. ಸರಿಯಾಗಿ ಹೇಳಿಸಾಯಬಾರದೇ?" ಎಂದ.

"ಬುದ್ಧಿಗೇಡಿಯೇ, ನಿನ್ನ ಮನೆಯ ಮಾಡಿಗೆ ಬೆಂಕಿಹೊತ್ತಿಕೊಂಡಿದೆ. ಹೋಗಿ ಆರಿಸು. ನಿನ್ನ ಆತಿಥ್ಯ ಸಾಕು. ಹೋಗುತ್ತೇನೆ" ಎಂದು ಯಾತ್ರಿಕನು ಗೃಹಸ್ಥನ ಕಪಾಲಕ್ಕೆ ನಾಲ್ಕು ಏಟು ಬಿಗಿದು, ತನ್ನ ಮೂಟೆ ಎತ್ತಿಕೊಂಡು ಆ ಕತ್ತಲಲ್ಲೇ ಹೊರಟುಬಿಟ್ಟನು. ಗೃಹಸ್ಥನು ಕಕ್ಕಾವಿಕ್ಕಿಯಾಗಿ ಹೊರಕ್ಕೆ ಓಡಿ ತನ್ನ ಮನೆ ಉರಿಯುವುದನ್ನು ನೋಡಿ ಲಬಲಬೋ ಕೂಗಿದ.






# ರಾಜಪ್ರತಿನಿಧಿ

ದೊಡ್ಡದಾದೊಂದು ಕಾಡು. ಅದರದೊಂದು ಪ್ರಾಂತದಲ್ಲಿರುವ ಪ್ರಾಣಿಗಳು ರಾಜನ ಭಯವಿಲ್ಲದೆ, ಸ್ವೇಚ್ಛಾಚಾರಿಗಳಾಗಿವೆಯೆಂದು ಸಿಂಹರಾಜನಿಗೆ ತಿಳಿಯಬಂದಿತು. ಇದಕ್ಕೇನು ಮಾಡುವುದೆಂದು ಮಂತ್ರಿ ಕತ್ತೆಯೊಡನೆ, ಸಲಹೆ ಕೇಳಿತು ಸಿಂಹ. ಆ ಪ್ರಾಂತದಲ್ಲಿ ಒಂದು ರಾಜಪ್ರತಿನಿಧಿಯನ್ನು ಏರ್ಪಡಿಸಬೇಕೆಂದು ಕತ್ತೆ ಸಲಹೆಕೊಟ್ಟಿತು.

ರಾಜಪ್ರತಿನಿಧಿಯಾಗಿರಲು ಕರಡಿಯೇ ತಕ್ಕುದು. ಆದುದರಿಂದ ಯುದ್ಧದಲ್ಲಿ ಚೆನ್ನಾಗಿ ನುರಿತ ಒಂದು ಕರಡಿಯನ್ನು ಆರಿಸಲಾಯಿತು. ಅದನ್ನು ರಾಜಪ್ರತಿನಿಧಿಯಾಗಿ ಕಳುಹಿಸುವಾಗ ಕತ್ತೆ ಅದಕ್ಕೆ ಹೀಗೆ ಬುದ್ಧಿ ಹೇಳಿತು:

"ಕರಡೀ, ಪ್ರಜೆಗಳಲ್ಲಿ ರಾಜಭಕ್ತಿ ಕಡಮೆಯಾಗದಂತೆ ನೋಡಿಕೊಳ್ಳುವಭಾರ ನಿನ್ನ ಮೇಲೆ ಬಿದ್ದಿದೆ. ಇದಕ್ಕೆ ಸ್ವಲ್ಪ ರಕ್ತಪಾತವೂ ಬೇಕು. ರಕ್ತಪಾತವಿಲ್ಲದೆ ಚರಿತ್ರೆಯಲ್ಲಿ ಹೆಸರು ಪಡೆಯಲು ಸಾಧ್ಯವೂ ಇಲ್ಲ. ಆದರೆ ಚರಿತ್ರೆ ಬಹಳ ಅಪಾಯಕರವಾದುದು. ಅದನ್ನು ನೋಡಿದರೆ ನಮ್ಮ ಚಕ್ರವರ್ತಿಗೂ ಬಹಳ ಭಯ. ಅಂತೆಯೇ ರಾಜಪ್ರತಿನಿಧಿಯಾದ ನೀನು ತುಂಬಾ ಜಾಗರೂಕತೆಯಿಂದಿರಬೇಕು."

ಕರಡಿ ಹೊರಟಿತು. ತಾನು ಪಾಲಿಸತಕ್ಕ ಅರಣ್ಯಪ್ರಾಂತವನ್ನು ಸೇರಿತು. ಹೊಸ ಉದ್ಯೋಗಕ್ಕೆ ಪ್ರವೇಶಮಾಡಿದ ಆನಂದದಿಂದ ಹೊಟ್ಟೆತುಂಬಾ ಹೆಂಡ ಕುಡಿಯಿತು. ವಿಪರೀತ ಮತ್ತೇರಿ ಮರಗಳನಡುವೆ ಬಿದ್ದುಕೊಂಡು ನಿದ್ರೆಹೋಯಿತು.

ಸ್ವಲ್ಪಹೊತ್ತಿಗೆ ಅಲ್ಲಿಗೊಂದು ಗುಬ್ಬಿಹಾರಿಬಂತು. ಬಿದ್ದಿರುವ ಕರಡಿಯಮೇಲೆ ಕುಳಿತುಕೊಂಡು ಆ ಗುಬ್ಬಿ ಕಿಚಕಚನೆ ಕಿರಿಚಿತು. ಕರಡಿಯನ್ನು ಮರದಕೊರಡೆಂದುಕೊಂಡಿತ್ತು ಗುಬ್ಬಿ.

ನಿದ್ರೆಮತ್ತಿನಲ್ಲಿದ್ದ ಕರಡಿ ಬಲವಂತವಾಗಿ ಕಣ್ಣುಬಿಡಿಸಿ "ರಾಜಪ್ರತಿನಿಧಿಯ ಶರೀರದಮೇಲೆ ಕುಳಿತಿರುವ ರಾಜದ್ರೋಹಿ ಯಾರದು?" ಎಂದು ಗರ್ಜಿಸಿತು.

"ಓ! ಈ ಮರದತುಂಡು ಮಾತಾಡುತ್ತಿದೆಯಲ್ಲಾ!" ಎಂದು ಆಶ್ಚರ್ಯಪಡುತ್ತ

ಎಸ್. ನಂಜುಂಡಯ್ಯ



ಗುಬ್ಬಿ ಕರಡಿಯ ತಲೆಯಮೇಲೆ ಕುಪ್ಪಳಿಸಿತು. ಮರುಕ್ಷಣವೇ ಕರಡಿ ಆ ಗುಬ್ಬಿಯನ್ನು ತನ್ನ ಬಾಯೊಳಗೆ ಜಾರಿಸಿಕೊಂಡು ಗುಳಕ್ಕನೆ ನುಂಗಿಬಿಟ್ಟಿತು!

ಕೂಡಲೇ ಸುತ್ತುಮುತ್ತಲೂ ಇರುವ ಮರಗಳ ಮೇಲಿನಿಂದ ಗಲಗಲನೆ ನಗುವಿನ ಶಬ್ದ ಮೊಳಗಿತು. "ಎಹೆಹೆ! ರಾಜಪ್ರತಿನಿಧಿ ಗುಬ್ಬಿಯನ್ನು ನುಂಗಿದ!" ಎಂದಿತೊಂದು ಕೊಕ್ಕರೆ. "ಬುದ್ಧಿಯಿಲ್ಲ! ಗುಬ್ಬೀನ ನುಂಗಿದ!" ಎಂದಿತು ಕಾಗೆ.

ಕಾಡಿನೊಳಗೆಲ್ಲಾ ನಗುವಿನ ಅಲೆ ಮಾರ್ಮೊಳಗಿತು. ಹಳ್ಳಗಳಲ್ಲಿರುವ ಕಪ್ಪೆಗಳೂ ನುಸಿಗಳೂ, ಕ್ರಿಮಿ, ಕೀಟಕಗಳೂ ರಾಜಪ್ರತಿನಿಧಿ ಗುಬ್ಬಿಯನ್ನು ನುಂಗಿದುದಕ್ಕೆ ನಕ್ಕವು. ಅದು ಅಲ್ಪರುಮಾಡುವ ಅಲ್ಪಕಾರ್ಯ.

ಈ ಸುದ್ದಿ ಬೇಗದಲ್ಲೇ ಸಿಂಹರಾಜನಿಗೂ ತಿಳಿಯಿತು. "ನೀಚನನ್ನು ರಾಜಪ್ರತಿನಿಧಿಯಾಗಿ ಏಕೆ ಆರಿಸಿದ್ದು? ಕೂಡಲೇ ತಿರಿಗಿ ಬರಲಿ. ಪ್ರಜೆಗಳನ್ನು ಭಯಗೊಳಿಸಿ, ಪೀಡಿಸಲಿಕ್ಕೆ ಕಳಿಸಿದರೆ ಈ ಕರಡಿ ಚರಿತ್ರೆಯಲ್ಲಿ ಅಪಕೀರ್ತಿ ಗಳಿಸಿತು!" ಎಂದು ಸಿಂಹವು ಆಗ್ರಹದಿಂದ ಗರ್ಜಿಸಿತು.

ಕರಡಿಯ ಹೊಸ ಉದ್ಯೋಗ ಹೋಯಿತು. ಅದು ತನ್ನ ಮನೆ ಸೇರಿತು.

ಅದರ ಸ್ಥಾನದಲ್ಲಿ ರಾಜಪ್ರತಿನಿಧಿಯಾಗಿ ಕಳಿಸಲು, ಕತ್ತೆ ಇನ್ನೊಂದು ಕರಡಿಯನ್ನು ನೇಮಿಸಿತು. ಅದು ಬಹಳ ಬುದ್ಧಿವಂತಿಕೆಯಿಂದ ತನ್ನ ಉದ್ಯೋಗದಲ್ಲಿ ಪ್ರವೇಶಮಾಡಿ ಸಪ್ಪಳಿಲ್ಲದೆ ಕುಳಿತಿತು. ಅದು ತನ್ನ ರಾಜಭವನದಾಟೆ ಎಲ್ಲಿಗೂ ಹೋಗಲಿಲ್ಲ. ಯಾವ ಮೃಗಗಳ ಗೋಜಿಗೂ ಹೋಗಲಿಲ್ಲ.

ಅರಣ್ಯದಲ್ಲಿದ್ದ ಪ್ರಾಣಿಗಳು ಯಥೇಚ್ಛವಾಗಿ ತಿಂದು ತಿರುಗುತ್ತಿರುವಾಗ, ಅವುಗಳನ್ನು ಪಾಲಿಸತಕ್ಕ ರಾಜಪ್ರತಿನಿಧಿ, ಸುಮ್ಮನೆ ಅಸೂಯೆಪಡುತ್ತ ನೋಡುತಿತ್ತು. ಅಂತೆಯೇ ಆಡವಿಪ್ರಾಣಿಗಳೆಲ್ಲಾ ಅದನ್ನು ಹೊಗಳಿದುವು. ಚರಿತ್ರೆಯಲ್ಲಿ ಅದಕ್ಕೆ ದೊಡ್ಡ ಸ್ಥಾನ ಸಿಕ್ಕಿತು. ಚಕ್ರವರ್ತಿ ಸಿಂಹವು ಬಹಳ ಸಂತೋಷಪಟ್ಟು ಆ ಕರಡಿಗೆ 'ರಾಜಮಾನ್ಯ' ಎಂಬ ಬಿರುದನ್ನಿತ್ತು ಗೌರವಿಸಿತು.






## 10

[ನಾನಾ ಯಾತನೆಗಳನ್ನು ಅನುಭವಿಸಿ, ಏಕಾಂಗಿಯಾಗಿ ಸಮುದ್ರದ ತೀರದಲ್ಲಿ ಬಂದು ಬಿದ್ದಿದ್ದ ರೂಪಧರನಿಗೆ ಮಹಾಮೇಧಿ ಮಹಾರಾಜನು ಆತಿಥ್ಯ ಮತ್ತು ಅಭಯಗಳನ್ನು ಕೊಟ್ಟನು. ರೂಪಧರನ ಗೌರವಾರ್ಥವಾಗಿ ನಡೆದ ಸತ್ಕಾರ ಕೂಟದಲ್ಲಿ ಅಂಧಗಾಯಕನು 'ಮರದ ಅಶ್ವದ' ಕಥೆ ಗಾನಮಾಡಲು ರೂಪಧರನು ಕಣ್ಣೀರು ಸುರಿಸಿದನು. ಅದನ್ನು ಕಂಡು ಮಹಾಮೇಧಿ ತನ್ನ ಅತಿಥಿಯನ್ನು 'ನೀನು ಯಾರು?' ಎಂದು ಪ್ರಶ್ನಿಸಿದನು]

**ರೂ**ಪಧರನು ಮಹಾಮೇಧಿ ಮಹಾರಾಜನಿಗೆ ತನ್ನ ಕುಲಗೋತ್ರಗಳನ್ನು ತಿಳಿಸಿ, ಟ್ರಾಯ್ ಪತನವಾದನಂತರ ತನಗೆ ಸಂಭವಿಸಿದ ಕಷ್ಟಗಳನ್ನು ವಿವರಿಸಿದನು. ಆತನ ಕಥೆಯನ್ನು ಕೇಳಿ ಎಲ್ಲರೂ ಆಶ್ಚರ್ಯಹೊಂದಿದರು.

ಕೊನೆಗೆ ಮಹಾಮೇಧಿ ಅಲ್ಲಿ ನೆರೆದಿದ್ದವರೊಂದಿಗೆ "ನಮ್ಮ ಅತಿಥಿಗೆ ನಾವೆಲ್ಲರೂ ಉಡುಗೊರೆಗಳನ್ನು ಕೊಡೋಣ. ನಾನು ಸ್ವತಃ ಈತನಿಗೆ ಚಿನ್ನ, ಚೀನಾಂಬರಗಳನ್ನು ಕೊಡುವವನಿದ್ದೇನೆ" ಎಂದನು. ಎಲ್ಲರೂ ಆತನ ಸಲಹೆಯನ್ನು ಅನುಮೋದಿಸಿದರು.

ಮೂರನೇಯ ದಿನ ಬೆಳಗಾದಕೂಡಲೇ ಉಡುಗೊರೆಗಳನ್ನೆಲ್ಲಾ ಬಂದರಿಗೆ ಕಳುಹಿಸಲಾಯಿತು. ಮಹಾಮೇಧಿ ತಾನೇ ಹತ್ತಿರವಿದ್ದು ಅವುಗಳನ್ನು ಹಡಗಿನಲ್ಲಿ ಉಚಿತಸ್ಥಾನಗಳಲ್ಲಿ ಇಡಿಸಿದನು. ಅವರು ರೂಪಧರನಿಗೆ ಅರಮನೆಯಲ್ಲಿ ಅಪೂರ್ವ ಸತ್ಕಾರಕೂಟವನ್ನು ಏರ್ಪಡಿಸಿದರು. ಎಲ್ಲರೂ ತುಂಬಾ ಉತ್ಸಾಹ

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ






ಆತನ ಮಾತುಗಳನ್ನು ಕೇಳಿ ಎಲ್ಲರೂ ಹರ್ಷಧ್ವನಿ ಮಾಡಿದರು. ರೂಪಧರನು ರಾಣಿಯಿಂದ ಹೋಗಲು ಅನುಮತಿಪಡೆದನು. ಆಕೆ ಆತನಿಗೆ ದಿವ್ಯವಾದ ದಿರುಸುಗಳನ್ನು ಉಡುಗೊರೆಯಾಗಿ ಕೊಟ್ಟಳು. ದಾಸಿಯರೊಂದಿಗೆ ರೊಟ್ಟಿ, ದ್ರಾಕ್ಷಾರಸಗಳನ್ನು ಕೊಟ್ಟು ಹಡಗಿನಬಳಿಗೆ ಕಳುಹಿಸಿದಳು.

ಯುವಕನಾವಿಕರು ಹಡಗಿನಲ್ಲಿ ರೂಪಧರನಿಗಾಗಿ ಕಂಬಳಿ ಹರಡಿ, ಹಾಸಿಗೆ ಸಿದ್ಧಪಡಿಸಿದರು. ರೂಪಧರನು ಹಡಗನ್ನೇರಿ ಹಾಸಿಗೆಯಮೇಲೆ ಕಾಲು ಚಾಚಿಕೊಂಡು ಮಲಗಿದನು. ನಾವಿಕರು ತಮ್ಮ ಸ್ಥಾನಗಳಲ್ಲಿ ಕುಳಿತು ಹುಟ್ಟು ಹಾಕಲಾರಂಭಿಸಿದರು. ಹಡಗು ಮುಂದಕ್ಕೆ ಚಲಿಸಿತು.

ದಿಂದಿದ್ದರು. ಆದರೆ ರೂಪಧರನುಮಾತ್ರ ಸ್ವದೇಶಕ್ಕೆ ಹೊರಡುವ ಆತುರತೋರುತ್ತಿದ್ದನು.

ಭೋಜನ ಮುಗಿದನಂತರ ಪಾನೀಯಗಳು ಬಂದುವು. ರೂಪಧರನು ಎದ್ದು ನಿಂತು "ಮಹಾರಾಜನೇ, ಮಹಾಜನರೇ, ನಿಮ್ಮ ಪುಣ್ಯದಿಂದ ನನ್ನ ಬಹುದಿನಗಳ ಅಭಿಲಾಷೆ ಈಡೇರಿ, ಸ್ವದೇಶಕ್ಕೆ ಹೊರಡುವವನಿದ್ದೇನೆ. ನೀವು ನನಗೆ ತೋರಿಸಿದ ಆದರಣೆ, ಮಾಡಿದ ಸಹಾಯ, ಕೊಟ್ಟ ಕಾಣಿಕೆಗಳನ್ನು ಆಜೀವಪರ್ಯಂತ ಮರೆಯುವುದಿಲ್ಲ. ದೇವರು ನಿಮಗೆ ಸದಾ ಸುಖಶಾಂತಿಗಳನ್ನು ಕೈಗೂಡಿಸುವಂತಾಗಲಿ, ನಿಮ್ಮ ದೇಶದಲ್ಲಿ ಯಾವ ಕಷ್ಟನಷ್ಟಗಳಿಲ್ಲದಂತಾಗಲಿ ಎಂದು ನಾನು ಕೋರುತ್ತೇನೆ" ಎಂದನು.

ರೂಪಧರನು ಕೂಡಲೇ ನಿದ್ರಾದೇವಿಯ ವಶವಾದನು. ತನ್ನ ಕಷ್ಟಗಳು ಇಂದಿಗೆ ಮುಗಿದುವೆಂಬ ಆನಂದದಲ್ಲಿ ಆತನು ಮೈಮರೆತು ಗಾಢನಿದ್ರೆಯಲ್ಲಿ ಮುಳುಗಿದನು. ಹಡಗು ವಾಯುವೇಗದಿಂದ ಹೊರಟು ಮಾರನೇಯದಿನ ಮುಂಜಾನೆಹೊತ್ತಿಗೆ ಇಥಾಕಾ ತೀರವನ್ನು ಸೇರಿತು. ಆ ರೇವನ್ನು ಸೇರಿದ ಹಡಗುಗಳಿಗೆ ಲಂಗರು ಹಾಕಬೇಕಾದ ಅಗತ್ಯವಿರಲಿಲ್ಲ. ಈ ರೇವಿಗೆ ಸಮೀಪದಲ್ಲಿ ಒಂದು ವೃಕ್ಷವಿತ್ತು. ಆ ಮರದ ಎಲೆಗಳು ತುಂಬಾ ದೊಡ್ಡವು. ಆ ವೃಕ್ಷದ ಪಕ್ಕದಲ್ಲೇ ಒಂದು ಗುಹೆಯಿತ್ತು. ಅದರಲ್ಲಿ ಜೇನುಗೂಡುಗಳಿದ್ದುವು. ಎತ್ತರವಾದ ಕಲ್ಲುಕಂಭಗಳಿದ್ದ ಆ





ಗುಹೆಗೆ ದೇವಕನ್ಯೆಯರು ಆಗಾಗ ಬರುತ್ತಿರುತ್ತಾರೆಂದು ಪ್ರತೀತಿ. ಮಾನವರೂಸಹ ಆ ಗುಹೆಗೆ ಹೋಗಲಡ್ಡಿಯಿರಲಿಲ್ಲ.

ಹಡಗು ರೇವನ್ನು ತಲುಪಿದಕೂಡಲೇ ನಾವಿಕರು ಅದನ್ನು ದಡಕ್ಕೆ ನೂಕಿದರು. ಮೈಮರೆತು ನಿದ್ರಿಸುತ್ತಿದ್ದ ರೂಪಧರನಿಗೆ ಎಚ್ಚರವಾಗದಂತೆ ಅವರು ಮೆಲ್ಲನೆ ಆತನನ್ನು ಎತ್ತಿಕೊಂಡು ಹೋಗಿ, ನೆರಳಿದ್ದ ಸ್ಥಳದಲ್ಲಿ ಹಾಸಿಗೆಸಮೇತ ಮಲಗಿಸಿದರು. ತರುವಾಯ ಆತನಿಗೆ ಕೊಟ್ಟ ಉಡುಗೊರೆಗಳನ್ನೆಲ್ಲಾ ಒಂದುಕಡೆ ರಾಶಿಹಾಕಿ, ಹಡಗನ್ನು ನಡೆಯಿಸಿಕೊಂಡು ತಮ್ಮ ದೇಶಕ್ಕೆ ಹಿಂತಿರುಗಿದರು.

ರೂಪಧರನು ಎಚ್ಚರಗೊಂಡು ಸುತ್ತಲೂ ನೋಡಿದನು. ಮಂಜು ದಟ್ಟವಾಗಿ ಹರಡಿದ್ದುದರಿಂದ ಆತನಿಗೆ ರೇವಿರುವ ಸ್ಥಳ ತಿಳಿಯಲಿಲ್ಲ. ಎದುರಾಗಿದ್ದ ರೇವು, ಪಕ್ಕದಲ್ಲಿದ್ದ ಬೆಟ್ಟಗಳನ್ನೂ ಸಹ ಆತನಿಂದ ಗುರುತುಹಿಡಿಯಲಾಗಲಿಲ್ಲ. ಆತನು ನಿರಾಶೆಯಿಂದ 'ಅಯ್ಯೋ, ಮತ್ತೆ ಎಲ್ಲೋ ನಿರ್ಜನಪ್ರದೇಶಕ್ಕೆ ಬಂದು ಸೇರಿದೆನಲ್ಲಾ. ಇಲ್ಲಿ ಮಾನವರು ಇದ್ದಾರೆಯೋ? ಇದ್ದರೆ ಅವರು ಕ್ರೂರಿಗಳೂ, ನರಮಾಂಸಭಕ್ಷಕರೂ ಇರಲಾರರಷ್ಟೆ. ಈ ಸಾಮಾನುಗಳನ್ನೆಲ್ಲಾ ಎಲ್ಲಿಡಲಿ? ಇಥಾಕಾ ಸೇರಿಸುವುದಾಗಿ ಮಾತುಕೊಟ್ಟ ಮಹಾಮೇಧಿ ಮಹಾರಾಜನು ನನಗೆ ಸಂಪೂರ್ಣ ಸಹಾಯ ಮಾಡಲಿಲ್ಲ. ಇಥಾಕಾ ಸೇರಿಸುವುದಾಗಿ ಹೇಳಿ ಮತ್ತೆಲ್ಲಿಗೋ ತಂದು ಸೇರಿಸಿರುವನು'' ಎಂದು ವಿಚಾರದಲ್ಲಿ ಮುಳುಗಿದನು. ಹಾಗೆಯೇ ಆತನು ಅಲ್ಲಿದ್ದ ವಸ್ತುಗಳನ್ನೆಲ್ಲಾ ಒಮ್ಮೆ ಎಣಿಸಿನೋಡಲು ಲೆಕ್ಕ ಸರಿಯಾಗಿತ್ತು. ಅವನು ಯೋಚಿಸುತ್ತಾ ಶತಪಥಮಾಡುತ್ತಿರಲು, ಕುರಿ ಕಾಯುವ ಹುಡುಗನೊಬ್ಬನು ಅತ್ತ ಬಂದನು. ಅವನನ್ನು ಕಂಡು ರೂಪಧರನಿಗೆ ಜೀವಬಂತು. "ದೇವರಂತೆ ಕಾಣಿಸಿದೆ ಹೈದಾ. ನೀನೇ ನನ್ನನ್ನು ಕಾಪಾಡಬೇಕು. ಇದು ಯಾವ ದೇಶ. ಇಲ್ಲಿನ ಜನರೆಂಥವರು? ನಿಜ ಹೇಳು'' ಎಂದು ರೂಪಧರನು ಕೇಳಿದನು.

ಅದಕ್ಕೆ ಆ ಯುವಕನು "ಅಯ್ಯಾ, ನಿಮಗೆ ಪ್ರಪಂಚಜ್ಞಾನ ಕಡಿಮೆಯಿರಬೇಕು. ಇಲ್ಲ ನೀವು ಯಾವುದೋ ದೂರದೇಶದಿಂದ ಬಂದಿರಬೇಕು. ಯಾಕೆಂದರೆ ನಮ್ಮದು ಅನಾಮ





ಬುದ್ಧಿಮತಿದೇವಿ ಕಾಣಿಸಿಕೊಂಡಳು. ಆಕೆ ನಗುತ್ತಾ "ನಿನಗಿಂತ ಯುಕ್ತಿವಂತರಿರಲಾರರು. ಎಷ್ಟು ಸುಲಭವಾಗಿ ಕಥೆ ಕಟ್ಟಿಸಿ ಹೇಳುವೆ! ನಿನ್ನ ದೇಶವನ್ನು ಸೇರಿಕೊಂಡರೂ ನಿನಗೆ ಈ ಚಾಳಿಬಿಟ್ಟಿಲ್ಲ!! ನನಗೂ ಸಹ ಒಂದಿಷ್ಟು ಬುದ್ಧಿಯಿದೆ. ನನ್ನಬಳಿ ನಿನ್ನ ಆಟ ಸಾಗುವುದಿಲ್ಲ. ನಿನ್ನನ್ನು ಹೇಗೋ ಸ್ವದೇಶಕ್ಕೆ ತಂದು ಸೇರಿಸಿದೆ. ಆದರೂ ನಿನ್ನ ಕಷ್ಟಗಳು ಮುಗಿದಿಲ್ಲ. ನೀನು ಸ್ವದೇಶಕ್ಕೆ ಬಂದಿರುವ ವಿಷಯ ಒಂದು ಹುಳುವಿಗಾದರೂ ತಿಳಿಯಬಾರದು. ಹುಷಾರ್" ಎಂದಳು.

"ತಾಯಿ, ಇದು ನಿಜವಾಗಿ ಇಥಾಕಾ ದೇಶವೇ? ಯಾಕೊ ನನಗೆ ನಂಬಿಕೆಯುಂಟಾಗಿಲ್ಲ. ನೀನು ನನ್ನನ್ನು ಅಪಹಾಸ್ಯಮಾಡುತ್ತಿಲ್ಲವಷ್ಟೇ?" ಎಂದ ರೂಪಧರ.

"ನಿನ್ನ ಈಗಿನ ಸ್ಥಿತಿಯಲ್ಲಿ ನೀನು ಯಾರನ್ನೂ ನಂಬುವಂತೆ ತೋರದು. ಮತ್ತೊಬ್ಬನಾಗಿದ್ದರೆ ತನ್ನ ಸ್ವದೇಶವನ್ನು ಸೇರಿದತಕ್ಷಣ ತನ್ನ ಮಡದಿಮಕ್ಕಳ ವಿಷಯವನ್ನು ಕೇಳುತ್ತಿದ್ದನು. ಆದರೆ ನಿನಗೆ ನನ್ನಲ್ಲೇ ಅಪನಂಬಿಕೆಯಿರುವಂತಿದೆ. ಇದೂ ಒಂದು ರೀತಿ ಒಳ್ಳೆಯದೇ ಆಯಿತು. ನಿನ್ನ ಹೆಂಡತಿ ನಿನಗಾಗಿ ಅಹೋರಾತ್ರಿ ಪರಿತಪಿಸುತ್ತಿದ್ದಾಳೆ. ಮೊದಲು ನಿನಗೆ ನಿನ್ನದೇಶವನ್ನು ತೋರಿಸುವೆನು, ನೋಡು" ಎಂದು ಬುದ್ಧಿಮತಿ ತನ್ನ ಮಹಿಮೆಯಿಂದ ಮಂಜನ್ನು ತೊಲಗಿಸಿದಳು. ರೂಪಧರನು ಅರಿತಿದ್ದ ಅನೇಕ ಗುರುತುಗಳು

ಧೇಯವಾದ ದೇಶವಲ್ಲ. ಇಥಾಕಾ ದೇಶವನ್ನು ಕುರಿತು ಟ್ರಾಯ್ ನಗರದಲ್ಲೆಲ್ಲಾ ಮಾತನಾಡಿಕೊಳ್ಳುತ್ತಿರುತ್ತಾರೆ" ಎಂದನು.

ರೂಪಧರನಿಗೆ ತಾನು ಇಥಾಕಾದೇಶವನ್ನು ಸೇರಿದೆನೆಂದು ತಿಳಿದಕೂಡಲೇ ಸಂತೋಷವಾಯಿತು. ಆದರೆ ಆನಂದವನ್ನು ಅಡಗಿಸಿಕೊಂಡು "ಹೌದು, ಕ್ರೀಟ್ ದ್ವೀಪಗಳಲ್ಲಿ ಈ ದೇಶವನ್ನು ಕುರಿತು ಕೇಳಿದ್ದೇನೆ. ನಾನೊಬ್ಬ ದುರುಳನನ್ನು ಕೊಲೆ ಮಾಡಿದುದರಿಂದ ತಲೆ ಮರೆಯಿಸಿಕೊಳ್ಳಲು ಓಡಿಬರಬೇಕಾಯಿತು" ಎಂದು ಆ ಹುಡುಗನಿಗೆ ಒಂದು ಕಥೆಯನ್ನು ಕಟ್ಟಿಸಿ ಹೇಳಿದನು.

ಆತನು ಮಾತನಾಡುತ್ತಿದ್ದಂತೆಯೇ ಆ ಯುವಕನು ಅದೃಶ್ಯನಾಗಿ ಅವನ ಸ್ಥಾನದಲ್ಲಿ

ಕಾಣಿಸಲು, ಅದು ತನ್ನದೇಶವೆಂದು ಆಗ ನಂಬಿದನು. ತದನಂತರ ಬುದ್ಧಿಮತಿದೇವಿ ರೂಪಧರನಿಗೆ ಗುಹೆಯನ್ನು ತೋರಿಸಿ "ರೂಪಧರ, ನಿನ್ನ ಈ ವಸ್ತುಗಳನ್ನೆಲ್ಲಾ ಇಲ್ಲಿ ಭದ್ರಪಡಿಸು," ಎಂದಳು. ರೂಪಧರನು ಅವುಗಳನ್ನು ಹೊತ್ತುಕೊಂಡು ಹೋಗಿ ಗುಹೆಯಲ್ಲಿಟ್ಟನು. ತದನಂತರ ಗವಿಯಬಾಯಿಗೆ ಬಾರಿ ಕಲ್ಲುಬಂಡೆಯನ್ನು ಅಡ್ಡವಿಟ್ಟು, ಇಬ್ಬರೂ ಒಂದು ಮರದಡಿ ಕುಳಿತು ಸಂಭಾಷಿಸಲಾರಂಭಿಸಿದರು.

"ರೂಪಧರ, ಕಳೆದ ಮೂರುವರ್ಷಗಳಿಂದ ಕೆಲವಾರು ದುಷ್ಟರು ನಿನ್ನ ಮನೆಯಲ್ಲಿ ಬಿಡಾರಹಾಕಿ, ನಿನ್ನ ಸೊತ್ತನ್ನು ತಿನ್ನುತ್ತಾ, ನಿನ್ನ ಹೆಂಡತಿಯನ್ನು ಸ್ವಯಂವರ ಮಾಡಿಕೊಳ್ಳುವಂತೆ ಒತ್ತಾಯಪಡಿಸುತ್ತಿದ್ದಾರೆ. ಅವರಿಗೆ ಬುದ್ಧಿ ಕಲಿಸುವ ಭಾರ ನಿನ್ನದು. ನಿನ್ನ ಮಡದಿ ಅವರಿಗೆ ಕೋಪಬರದಂತೆ ಯಾವದೋ ನೆಪಹೂಡಿ ಕಾಲನೂಕುತ್ತಿರುವಳು. ಆಕೆ ನಿನ್ನ ಆಗಮನವನ್ನು ಆತುರದಿಂದ ನಿರೀಕ್ಷಿಸುತ್ತಿರುವಳು."

"ತಾಯಿ, ನಿನ್ನ ಕೃಪೆಯೊಂದಿದ್ದರೆ ನಾನು ಆ ದುರುಳರನ್ನು ಕ್ಷಣಮಾತ್ರದಲ್ಲಿ ಸದೆಬಡಿಯುವೆನು. ಈಗೇನು ಮಾಡಲಿ? ಹೇಳು" ಕಾತರಸ್ವರದಿಂದ ಕೇಳಿದ ರೂಪಧರ.

"ನಿನ್ನ ಗುರುತು ಯಾರಿಗೂ ತಿಳಿಯದಂತೆ ರೂಪವನ್ನು ಬದಲಾಯಿಸುವೆನು. ನಿನ್ನನ್ನು ನಿನ್ನ ಹೆಂಡತಿಮಕ್ಕಳೂ ಗುರುತಿಸಬಾರದು! ಕೂಡಲೇ ನೀನು ನಿನ್ನ ನಂಬಿ







ರೂಪಧರನು ಅನೇಕ ಗುಡ್ಡಗಾಡುಗಳನ್ನು ದಾಟಿ ಹಂದಿಚೇಕನಿದ್ದ ಸ್ಥಳಕ್ಕೆ ಬಂದು ಸೇರಿದನು. ರೂಪಧರನ ನಂಬಿಕೆಯ ಬಂಟರಲ್ಲಿ ಈ ಹಂದಿಚೇಕನೂ ಒಬ್ಬ. ಒಂದು ವಿಶಾಲವಾದ ಮೈದಾನದಲ್ಲಿ ತಾನೂ ಹಂದಿಗಳೊಂದಾಗಿರಲು ಒಂದು ಮನೆಯನ್ನು ಕಟ್ಟಿಕೊಂಡಿದ್ದನು. ಆ ಮನೆಗೆ ಪ್ರಹರಿಗೋಡೆಯನ್ನು ಕಟ್ಟಿದ್ದನು. ಗೋಡೆಯಮೇಲೆ ಪಾಪಸಕಳ್ಳಿ ಬೆಳೆಸಿದ್ದನು. ಅವನ ಆ ಕೋಟೆಯಲ್ಲಿ ಸುಮಾರು ಸಾವಿರ ಹಂದಿಗಳಿದ್ದುವು. ರೂಪಧರನ ಮನೆಗೆ ಬಂದು ಕುಳಿತಿದ್ದ ಪುಂಡರು ಅನೇಕ ಹಂದಿಗಳನ್ನು ನುಂಗಿದ್ದರು. ಹಂದಿಗಳನ್ನು ಕಾಯಲು ನಾಲ್ಕು ಬೇಟೆ ನಾಯಿಗಳಿದ್ದುವು.

ಕೆಯ ಬಂಟ ಹಂದಿಚೇಕನಬಳಿಗೆ ಹೋಗು. ಅವನು ನಿನ್ನ ಹಂದಿಗಳನ್ನು ಕಾಗೆ ಬೆಟ್ಟದ ಬಳಿಮೇಯಿಸುತ್ತಿದ್ದಾನೆ. ಇಷ್ಟರಲ್ಲಿ ನಾನು ನಿನ್ನಮಗ ಧೀರಮತಿಯನ್ನು ಮನೆಗೆ ಸೇರಿಸುವೆನು. ನಿನ್ನ ಕ್ಷೇಮಸಮಾಚಾರ ತಿಳಿಯಲೆಂದೇ ಅವನು ರಾರಾಜನ ಬಳಿಗೆ ಹೋಗಿದ್ದಾನೆ" ಎಂದಳು ಬುದ್ಧಿಮತಿ.

ತರುವಾಯ ಆಕೆ ರೂಪಧರನನ್ನು ಹಣ್ಣು ಹಣ್ಣು ಮುದುಕನಾಗಿ ಬದಲಾಯಿಸಿದಳು. ಆತನ ಶರೀರವೆಲ್ಲಾ ಸುಕ್ಕುಗಟ್ಟಿತು. ತಲೆ ಕೆದರಿ ಗಂಟು ಕಟ್ಟಿತ್ತು. ಆತನ ಕೈಗೆ ಒಂದು ಕೋಲು ಮತ್ತು ಒಂದು ಜೋಳಿಗೆ ಕೊಟ್ಟಳು. ತರುವಾಯ ಕಾಗೆಬೆಟ್ಟಕ್ಕೆ ಹೋಗುವದಾರಿ ಆತನಿಗೆ ತಿಳಿಸಿ ಮಾಯವಾದಳು.

ರೂಪಧರನು ಅಲ್ಲಿಗೆ ಬಂದಾಗ ಹಂದಿಚೇಕನು ಮನೆಯ ಬಾಗಿಲಮುಂದೆ ಕುಳಿತು ಜೋಡು ಹೊಲಿಯುತ್ತಿದ್ದನು. ರೂಪಧರನನ್ನು ಕಂಡಕೂಡಲೇ ನಾಯಿಗಳು ಭೀಕರವಾಗಿ ಬೊಗಳುತ್ತಾ ಆತನ ಮೇಲೆ ಬಿದ್ದುವು. ರೂಪಧರನು ತಕ್ಷಣ ತನ್ನ ಕೋಲನ್ನು ದೂರ ವೆಸೆದು, ನೆಲದಮೇಲೆ ಕುಳಿತುಬಿಟ್ಟನು. ಇಷ್ಟರಲ್ಲಿ ಹಂದಿಚೇಕನು ಎದ್ದು ಬಂದು, ನಾಯಿಗಳನ್ನು ದೂರ ಅಟ್ಟಿ, "ಎಲಾಮುದುಕಪ್ಪಾ, ನಾನು ಬರುವುದು ಸ್ವಲ್ಪ ತಡವಾಗಿದ್ದರೆ ನಾಯಿಗಳು ನಿನ್ನನ್ನು ಹೊಟ್ಟೆಗೆ ಹಾಕಿಕೊಳ್ಳುತ್ತಿದ್ದುವು. ಈಗಾಗಲೇ ನನ್ನ ಬಾಳು ಶೋಕಮಯವಾಗಿದೆ. ಚಿನ್ನದಂತಹ ಯಜಮಾನ ತಿಂಡಿ ಬಟ್ಟೆಗಳಿಲ್ಲದೆ ಅಲೆಯುತ್ತಿದ್ದಾನೆ.









ಕೆಲಸಕ್ಕೆಬಾರದ ಪುಂಡರು ಆತನ ಮನೆ ಸೇರಿ ಹಂದಿಗಳನ್ನು ಭಕ್ಷಿಸುತ್ತಿದ್ದಾರೆ. ಬಾ, ಬಳಿಗೆ ಬಾ. ಒಂದಿಷ್ಟು ಊಟಮಾಡಿ ನಿನ್ನ ವಿಷಯ ವೆಲ್ಲಾ ಹೇಳು" ಎಂದ.

ರೂಪಧರನು ಊಟಮಾಡುತ್ತಿರಲು ಹಂದಿ ಚೇಕನು ಯಜಮಾನನನ್ನು ಪ್ರಶಂಸೆ ಮಾಡು ತ್ತಿದ್ದನು. ಆತನು ರಾರಾಜನೊಂದಿಗೆ ಯುದ್ಧಕ್ಕೆ ಹೊರಟು, ನಾಪತ್ತೆಯಾಗಿರುವ ವಿಷಯವನ್ನು ತಿಳಿಸಿದ.

ರೂಪಧರನು "ಅಯ್ಯೊ, ನಿನ್ನ ಯಜ ಮಾನನನ್ನು ಬಹಳ ಹೊಗಳುತ್ತಿರುವೆ. ಯಾರು ಆತ? ನಾನು ಅನೇಕದೇಶಗಳಲ್ಲಿ ಅಲೆದಾಡಿರುವೆನು. ಬಹುಶಃ ನಾನೇನಾದರೂ ಆತನನ್ನು ಕಂಡಿದ್ದರೆ ಆತನ ಸಮಾಚಾರ ನಿನಗೆ ತಿಳಿಸುವೆನು" ಎಂದನು.

ಅದಕೆ ಹಂದಿಚೇಕನು ಉತ್ತರಕೊಟ್ಟ: "ನೀನು ಸಾವಿರಹೇಳು. ನಿನ್ನ ಮಾತು ಗಳನ್ನು ಯಜಮಾನಿಯಾಗಲೀ ಆತನ ಮಗ ನಾಗಲೀ ನಂಬುವುದಿಲ್ಲ. ಹಿಂದೆ ಅನೇಕರು ಬಂದು ಏನೇನೋ ಹೇಳಿದರು. ತಿಂಡಿ ಗಾಗಿಯೋ ಬಟ್ಟೆಗಾಗಿಯೋ ಆಶೆಪಟ್ಟು ಕಥೆ ಕಟ್ಟಿಸಿ ಹೇಳಬಹುದು"

"ಅನ್ನ ಮತ್ತು ಬಟ್ಟೆಗಾಗಿ ಆಶೆಪಟ್ಟು ಸುಳ್ಳಾಡುವುದು ಪರಮ ನೀಚಕಾರ್ಯ. ನಾನು ಅಂಥಮನುಷ್ಯನಲ್ಲ. ಪ್ರಮಾಣಮಾಡಿ ಹೇಳುತ್ತೇನೆ. ನಿನ್ನ ಯಜಮಾನನು ಈ ಅಮಾ ವಾಸ್ಯೆ ಮುಗಿಯುವುದರೊಳಗೆ ಮನೆಗೆ ಬರು ತ್ತಾನೆ. ಆತನ ಶತ್ರುಗಳು ಪರಾಜಿತರಾಗು ವರು. ನನಗೆ ಈಗೇನೂ ಬಹುಮಾನ ಬೇಡ. ನನ್ನ ಮಾತು ನಿಜವಾದರೆ ಆಗ ಏನಾದರೂ ಕೊಡಿ, ತೆಗೆದುಕೊಳ್ಳುತ್ತೇನೆ" ಎಂದನು.

"ಹುಚ್ಚ, ಆತನು ಇನ್ನೆಲ್ಲಿ ಬರುತ್ತಾನೆ. ಎಂದೋ ತೀರಿಹೋಗಿರಬೇಕು. ಆ ಪತಿ ವ್ರತಾಶಿರೋಮಣಿಗೆ ಪತಿಯು ಆಗಮ ನಕ್ಕಿಂತಲೂ ಅಮೌಲ್ಯವಾದುದೇನಿಲ್ಲ. ನಿಕ್ಷೇಪ ಪದಂತಹ ಹುಡುಗ. ತಂದೆಯಂತೆಯೇ ಬಹಳ ಅಂದವಾಗಿರುತ್ತಾನೆ" ಎಂದು ನಿಡು ಸುಯ್ದ ಹಂದಿಚೇಕ.

ತರುವಾಯ ಇಬ್ಬರೂ ತುಂಬಾಹೊತ್ತು ಸಂಭಾಷಿಸಿದರು. ರೂಪಧರನು ತನ್ನ ವಿಷಯ ಹೇಳಿಕೊಳ್ಳುತ್ತಾ ತಾನು ಕ್ರೀಟ್‌ದೇಶಸ್ಥ



ನೆಂದೂ, ಟ್ರಾಯ್ ಯುದ್ಧದಲ್ಲಿ ಭಾಗವಹಿಸಿದೆನೆಂದೂ, ರೂಪಧರನನ್ನು ಸ್ವಂತಬಲ್ಲೆನೆಂದೂ ಹೇಳಿದನು. ತಾನು ಹಿಂತಿರುಗಿ ಬರುವಾಗ್ಗೆ ರೂಪಧರನನ್ನು ಮತ್ತೆ ಕಂಡುದಾಗಿಯೂ ಹೇಳಿದನು. ಆದರೆ ಹಂದಿಚೇಕನು ಆ ವಿಷಯಗಳನ್ನು ನಂಬಲಾರೆನೆಂದು ನಿದಾರ್ಕ್ಷಿಣ್ಯವಾಗಿ ನುಡಿದನು.

ಸಂಜೆಯವೇಳೆಗೆ ಹಂದಿಚೇಕನ ನೌಕರರು ಹಂದಿಮಂದೆಗಳೊಂದಿಗೆ ಹಿಂತಿರುಗಿ ಬಂದರು. ಆ ರಾತ್ರಿ ಹಂದಿಚೇಕನು ತನ್ನ ಅತಿಥಿಗೆ ಒಂದು ಭೋಜನಕೂಟವೇರ್ಪಡಿಸಿದನು. ಹೊರಗೆ ಮಳೆ ಪ್ರಾರಂಭವಾಯಿತು. ಚಂಡಮಾರುತ ಬೀಸಿತು. ರೂಪಧರನಿಗೆ ಚಳಿಯಾಯಿತು. ಆತನು ಹಂದಿಚೇಕನೊಂದಿಗೆ "ಟ್ರಾಯ್ ಯುದ್ಧದಲ್ಲಿ ಒಂದುಸಾರಿ ಏನು ನಡೆಯಿತು ಗೊತ್ತೊ? ಒಂದು ರಾತ್ರಿ ನಾವು ಕೆಲವರು ಟ್ರಾಯ್‌ನಗರದ ಕೋಟೆಗೋಡೆಯನ್ನು ಕಾಯಲುಹೋಗಿ ಪೊದೆಗಳಬಳಿ ಮಲಗಿಕೊಂಡೆವು. ವಿಪರೀತವಾದ ಗಾಳಿ, ಮಂಜು ಬೀಳುತಿತ್ತು. ನನ್ನೊಬ್ಬನಬಳಿಮಾತ್ರ ದುಪ್ಪಟಿಯಿರಲಿಲ್ಲ. ಅರ್ಧರಾತ್ರಿವೇಳೆಯಲ್ಲಿ ನಾನು ರೂಪಧರನನ್ನು ಎಬ್ಬಿಸಿ ನನ್ನ ದುಸ್ಥಿತಿ ಹೇಳಿಕೊಂಡೆ. ಆತನು ಕೂಡಲೇ ಒಂದು ಯುಕ್ತಿ ಹೂಡಿದ. ತನಗೆ ಕೆಟ್ಟಕನಸು ಬಿತ್ತೆಂದೂ, ಯಾರಾದರೂ ರಾರಾಜನಬಳಿಗೆ ಹೋಗಿ ಸಹಾಯಕ್ಕಾಗಿ ಮತ್ತಷ್ಟು ಜನರನ್ನು ಕರೆದು ತರಬೇಕೆಂದೂ ಹೇಳಿದನು. ಒಬ್ಬ ಯುವಕನು ತಟಕ್ಕನೆದ್ದು, ತನ್ನ ದುಪ್ಪಟಿಯನ್ನು ಅಲ್ಲೇ ಎಸೆದು, ಹಡಗಿನಬಳಿಗೆ ಓಡಿದನು. ಕೂಡಲೇ ನಾನು ಆ ದುಪ್ಪಟಿ ಹೊದೆದುಕೊಂಡು ಆರಾತ್ರಿ ಕಳೆದೆ'' ಎಂದನು.

"ಒಳ್ಳೆ ಕಥೆ ಹೇಳಿದೆ ತಾತ. ಈ ರಾತ್ರಿ ನಿನಗೆ ಹೊದ್ದುಕೊಳ್ಳಲು ಕಂಬಳಿ ಕೊಡುತ್ತೇನೆ, ಹೆದರಬೇಡ'' ಎಂದ ಹಂದಿಚೇಕ ನಗುತ್ತಾ.

ಒಲೆಯಹತ್ತಿರ ಚರ್ಮದಹಾಸಿಗೆ ಹರಡಿ ರೂಪಧರನನ್ನು ಅದರಮೇಲೆ ಮಲಗಿಸಿದರು. ಹಂದಿಚೇಕನು ಆತನಮೇಲೆ ದಪ್ಪನೆಯ ಕಂಬಳಿಯನ್ನು ಹೊದೆಸಿದನು. ಬೆಚ್ಚಗೆ ಮಲಗಿಕೊಂಡು ರೂಪಧರನು ಸುಖ ನಿದ್ರೆ ಮಾಡಿದನು.

[ಇನ್ನೂ ಇದೆ]






# ವಿಧಿತಂದ ವರ

ಉಗ್ರಸೇನನೆಂಬ ರಾಜನಿಗೆ ಮಾಧವಿ ಎಂಬ ಮಗಳಿದ್ದಳು. ಆಕೆ ಅಮಿತಸುಂದರಿ. ಆಕೆಗೆ ಮದುವೆಯ ವಯಸ್ಸಾದಂತೆಲ್ಲಾ ರಾಜನಿಗೆ ಕಳವಳ ಹೆಚ್ಚಾಗುತಿತ್ತು. ಇಂತಹ ಸುಂದರಿಗೆ ತಕ್ಕ ವರನನ್ನು ಎಲ್ಲಿಂದ ಹುಡುಕುವುದು? ವರನೆಲ್ಲಿ ಸಿಗುತ್ತಾನೆ. ಕಾಗೆಯ ಕೊಕ್ಕಿಗೆ ತೊಂಡೆ ಹಣ್ಣು ಕಟ್ಟಿದಂತೆ ಮಾಧವಿಯನ್ನು ಸಾಮಾನ್ಯನಿಗೆ ಕೊಟ್ಟು ಮದುವೆ ಹೇಗೆ ಮಾಡುವುದು? ಈ ಸಮಸ್ಯೆ ಆತನ ಚಿಂತೆಗೆ ಕಾರಣವಾಗಿತ್ತು. ಉಗ್ರಸೇನಮಹಾರಾಜನು ಅನೇಕ ದೇಶಗಳ ರಾಜಕುಮಾರರ ತಸವೀರುಗಳನ್ನು ತರಿಸಿ ನೋಡಿದನು. ಅವರಲ್ಲಿ ಯಾರೊಬ್ಬರೂ ಮಾಧವಿಯ ಕಾಲಿನ ಅಂಗುಷ್ಠಕ್ಕೆ ಸರಿದೂಗುವಂತೆ ಕಾಣಿಸಲಿಲ್ಲ.

ಕೊನೆಗೆ ಆತನು ತನ್ನ ಸಚಿವನಾದ ಸುಬುದ್ಧಿಯೊಂದಿಗೆ "ಅಮಾತ್ಯರೇ, ನಮ್ಮ ರಾಜಕುಮಾರಿಗೆ ಅನುರೂಪನಾದ ವರನು ಸಿಗುವಬಗೆ ಹೇಗೆ?" ಎಂದು ಕೇಳಿದನು. "ಮಹಾಪ್ರಭು, ರಾಜಕುಮಾರನೇ ಆಗಬೇಕೆಂಬ ನಿಯಮಯೇಕೆ? ರಾಜಕುಮಾರಿಗೆ ಅನುರೂಪನಾದವನು ಯಾರೋ ಆತನಿಗೆ ಕೊಟ್ಟು ವಿವಾಹ ಮಾಡೋಣ" ಎಂದನು.

ಅಂದಿನಿಂದ ರಾಜನು ಸುಂದರತರುಣರಿಗಾಗಿ ಶೋಧಿಸಲಾರಂಭಿಸಿದನು. ಅಂದಚೆಂದಗಳಿರುವ ಯುವಕರು ಅನೇಕರು ಕಾಣಿಸಿದರಾದರೂ, ಯಾರೂ ಮಾಧವಿಯ ಪತಿಯಾಗಲು ಅರ್ಹರಿರಲಿಲ್ಲ.

ರಾಜನ ಚಿಂತೆ ಮತ್ತಷ್ಟು ಹೆಚ್ಚಾಯಿತು. ಒಂದುದಿನ ಆತನು ನಿದ್ರಿಸುತ್ತಿರುವಾಗ ಒಂದು ವಿಚಿತ್ರಕನಸಾಯಿತು. ಕನಸಿನಲ್ಲಿ ಬ್ರಹ್ಮದೇವನು ಕಾಣಿಸಿಕೊಂಡು "ಎಲೈ ಹುಚ್ಚನೇ, ಮಗಳ ಮದುವೆಗಾಗಿ ನೀನೇಕೆ ಇಷ್ಟು ಕಳವಳಪಡುವೆ? ಅವಳಿಗೂ, ಅವಳ ಭಾವೀಪತಿಗೂ ಆಗಲೇ ಗಂಟುಹಾಕಿದ್ದೇನೆ" ಎಂದನು.

"ದೇವಾ, ಆತನು ಯಾರು? ಆತನ ಹೆಸರು ಏನು" ಎಂದು ರಾಜನು ಭಕ್ತಿಕಂಪಿತವಾದಸ್ವರದಿಂದ ಬ್ರಹ್ಮನನ್ನು ಕೇಳಿದನು. "ಹೆಸರು ಕುರರವಟ್" ಎಂದು ಹೇಳಿ

ಎಚ್. ನಾರಾಯಣರಾವ್





ಬ್ರಹ್ಮನು ಅಂತರ್ಧಾನನಾದನು. ರಾಜನು ನಿದ್ರೆಯಿಂದ ಎಚ್ಚೆತ್ತನಂತರ ಕನಸೇನೋ ಜ್ಞಾಪಕವಿದ್ದರೂ, ಮಾಧವಿಯ ಭಾವಿ ಪತಿಯ ಹೆಸರುಮಾತ್ರ ಮರೆತುಹೋಯಿತು. ಅದು ಮಾನವನ ಹೆಸರಿನಂತೆ ಆತನಿಗೆ ತೋರ ಲಿಲ್ಲ. ಕನಸಾಗಿಯೂಸಹ ಪ್ರಯೋಜನವಿಲ್ಲ ದಾಯಿತು. ಕೊಂಚ ದಿನಗಳಮೇಲೆ ಬ್ರಹ್ಮನು ಪುನಃರಾಜನ ಕನಸಿನಲ್ಲಿ ಕಾಣಿಸಿ "ನಿನ್ನ ಅಳಿಯನನ್ನು ಆಗಲೇ ನಿರ್ಣಯಿಸಿರುವೆ ನೆಂದು ಹೇಳಲಿಲ್ಲವೇ? ಇನ್ನೂ ನೀನು ಏಕೆ ಚಿಂತಿಸುವೆ?" ಎಂದು ಗದರಿಸಿದನು.

"ದೇವಾ, ಆ ಅಳಿಯನಾಗುವ ಪುಣ್ಯಾತ್ಮನ ಹೆಸರೇನು?" ಎಂದು ಕೇಳಿದ ರಾಜ.

"ಕುರರವಟ್" ಎಂದು ಹೇಳಿ ಬ್ರಹ್ಮನು ಮಾಯವಾದನು.

ರಾಜನಿಗೆ ಈಸಾರಿ ಈ ವಿಚಿತ್ರವಾದ ಹೆಸರು ಜ್ಞಾಪಕವಿತ್ತು. ಮರುದಿನಬೆಳಗ್ಗೆ ಆತನು ಸುಬುದ್ಧಿಯನ್ನು ಕರೆದು "ಮಂತ್ರಿ, ನಮ್ಮ ರಾಜಕುಮಾರಿಗೆ ಕುರರವಟ್ ಎಂಬಾತನು ಪತಿಯಾಗುವನಂತೆ. ಬ್ರಹ್ಮದೇವನು ನನಗೆ ನಿನ್ನೆ ಕನಸಿನಲ್ಲಿ ಹೇಳಿದನು. ಅಂತಹ ವಿಚಿತ್ರವಾದ ಹೆಸರುಳ್ಳಾತನು ಈ ಪ್ರಪಂಚದಲ್ಲಿ ಇರುವುದು ಅಸಂಭವ. ಹಾಗೇನಾದರೂ ಇದ್ದರೆ ಆತನನ್ನು ಹಿಡಿದು ತರಿಸು. ಆತನು ನನ್ನ ಮಗಳಿಗೆ ಅನುರೂಪನಾದ ವರನಿರಲೇಬೇಕು. ಇಲ್ಲದಪಕ್ಷಕ್ಕೆ ಬ್ರಹ್ಮನು ಇಷ್ಟೊಂದು ಶ್ರದ್ಧೆವಹಿಸಲಾರ" ಎಂದನು.

"ಮಹಾಪ್ರಭು, ಈ ಹೆಸರನ್ನು ಬಹಳ ರಹಸ್ಯವಾಗಿಟ್ಟರಬೇಕು. ಇಲ್ಲದಿದ್ದರೆ ಯಾರೋ ಒಬ್ಬನು ಈ ಹೆಸರನ್ನಿಟ್ಟುಕೊಂಡು, ರಾಜಕುಮಾರಿಯನ್ನು ಮದುವೆಯಾದಾನು" ಎಂದು ಮಂತ್ರಿ ಎಚ್ಚರಿಸಿದು.

ತರುವಾಯ ಆತನು ಕೆಲವಾರು ಬುದ್ಧಿವಂತರಾದ ದೂತರನ್ನು ಕರೆದು "ನೀವು ದೇಶದಲ್ಲೆಲ್ಲಾ ಸುತ್ತಾಡಿ, ಯಾವುದಾದರೂ ವಿಚಿತ್ರವಾದ ಹೆಸರಿನವರಿದ್ದರೆ ಅವರ ಹೆಸರು, ಇರುವ ಸ್ಥಳ ಮುಂತಾದ ವಿಷಯಗಳನ್ನು ಬರೆದುಕೊಂಡು ಬನ್ನಿ" ಎಂದನು.

ಅವರು ಹೋಗಿ ಎಷ್ಟೋ ವಿಚಿತ್ರವಾದ ಹೆಸರುಗಳ ಪಟ್ಟಿ ತಂದರು. ಅವರಲ್ಲೊಬ್ಬ ಕುರರವಟ್ ಎಂಬ ಹೆಸರು ಬರೆದುಕೊಂಡು



ಬಂದಿದ್ದನು. ಅದನ್ನು ನೋಡಿ ಸಚಿವನು ನಿಬ್ಬೆರಗಾಗಿ "ಯಾರಿವನು? ಎಲ್ಲಿರುತ್ತಾನೆ?" ಎಂದು ಕೇಳಿದನು.

"ಅವನೊಬ್ಬ ಬೇಡರ ಯುವಕ. ನಮ್ಮ ನಗರಕ್ಕೆ ಪೂರ್ವ ದಿಕ್ಕಿನಲ್ಲಿರುವ ಅರಣ್ಯದಲ್ಲಿ ಅವನನ್ನು ಕಂಡೆ" ಎಂದ ದೂತ.

ಸುಬುದ್ಧಿ ಕೂಡಲೇ ರಾಜನಬಳಿಗೆ ಹೋಗಿ "ಮಹಾಪ್ರಭು, ನೀವು ಹೇಳಿದ ಹೆಸರಿನ ಯುವಕನೊಬ್ಬನು ಇರುವಂತೆ ಸುದ್ದಿಬಂತು. ನಾನು ಅವನ ವಿಷಯವನ್ನು ಕೂಲಂಕಷ ವಾಗಿ ತಿಳಿದುಕೊಂಡು ಬರುತ್ತೇನೆ" ಎಂದ. ರಾಜನು ಸರಿಯೆಂದು ಒಪ್ಪಿಕೊಂಡನು.

ಮೂರು ದಿನಗಳನಂತರ ಮಂತ್ರಿ ಹಿಂತಿರುಗಿದನು. ಆತನೊಂದಿಗೆ ನರಪೇತಲ ಯುವಕನೊಬ್ಬನಿದ್ದನು. ಅವನ ಶರೀರಬಣ್ಣ ಅಚ್ಚ ಕಪ್ಪು. ತಲೆಗೂದಲು ಗಂಟುಕಟ್ಟಿತ್ತು. ಮೈಮೇಲೆ ಸರಿಯಾಗಿ ಬಟ್ಟೆ ಇರಲಿಲ್ಲ.

ರಾಜನು ಆ ಯುವಕನಕಡೆ ನೋಡಲೇ ಇಲ್ಲ. "ಅಮಾತ್ಯರೇ, ವರನನ್ನು ಕರೆತರುವುದಾಗಿ ಹೇಳಿದಿರಿ. ನೋಡಿದರೆ ನೀವೊಬ್ಬರೇ ಬಂದಿದ್ದೀರಿ. ಅವನು ಬರುವುದಿಲ್ಲವೆಂದು ಹೇಳಿದನೇ? ಇಲ್ಲ ಅವನು ನಾವು ನೆನಸಿದ ನಾಮದಾತನಲ್ಲವೇ? ಅದೇಕೆ ಮೌನವಹಿಸಿರುವಿರಿ?" ಎಂದ ರಾಜ.

ಸುಬುದ್ಧಿ ದೀನಸ್ವರದಲ್ಲಿ "ಏನು ಹೇಳಲಿ ಮಹಾಪ್ರಭು, ನನ್ನ ಬಾಯಿಂದ ಮಾತೇ ಹೊರಡದು. ನಾವು ನೆನಸಿದ ಹೆಸರುಳ್ಳ ಯುವಕನೇ ಈತ" ಎಂದು ತನ್ನ ಸಂಗಡ ಬಂದಿದ್ದ ಬೇಡರ ತರುಣನನ್ನು ತೋರಿಸಿದನು.

ರಾಜನ ಮುಖ ತಕ್ಷಣ ಬಿಳುಪಾಯಿತು. ತರುವಾಯ ಕೋಪದಿಂದ ಕೆಂಪಾಯಿತು. "ಇವನು... ಇವನೇ. ಇವನನ್ನು ನಮ್ಮತನಕ ಕರೆತಂದುದಾದರೂ ಏಕೆ? ಕೂಡಲೇ ಇವನ ತಲೆ ಹಾರಿಸು. ಬ್ರಹ್ಮದೇವ, ಅವನ ಗಂಟುಗಳು ಏನಾಗುವುದೋ ನೋಡಿಬಿಡೋಣ. ಹೂಂ. ಹೋಗು" ಎಂದು ಅಬ್ಬರಿಸಿದ ರಾಜ.

ಮಂತ್ರಿ ಬೇಡರ ಯುವಕನನ್ನು ಸಂಗಡ ಕರೆದುಕೊಂಡು ಅಡವಿಗೆ ಹೋದನು. ರಾಜನು ಕುಪಿತನಾದನೆಂದರೆ ಆಶ್ಚರ್ಯವೇನು? ಆತನು ಕಂಡೂ ಕಂಡೂ ಚಿನ್ನದಂತಹ ತನ್ನ ಮಗಳನ್ನು ಈ ದೃಷ್ಟಿಗೊಂಬೆಗೆ





ಕೊಟ್ಟು ಹೇಗೆ ಮದುವೆಮಾಡುತ್ತಾನೆ. ಆದರೆ ಸುಬುದ್ಧಿಗೆ ಒಂದು ವಿಷಯದಲ್ಲಿ ಬಾಧೆಯುಂಟಾಯಿತು. ವಿನಾಕಾರಣ ಈ ಯುವಕನ ಪ್ರಾಣತೆಗೆಯುವುದು ಸರಿಕಾಣ ಲಿಲ್ಲ. ಅವನು ಯಾವ ಪಾಪವನ್ನೂ ಅರಿಯದ ಮುಗ್ಧ. ತನ್ನನ್ನು ಕೊಲ್ಲುವಂತೆ ರಾಜನಿತ್ತ ಆಜ್ಞೆಯೂ ಸಹ ಅವನಿಗೆ ತಿಳಿಯದು. ಒಂದು ಮಾತಿನಲ್ಲಿ ಹೇಳುವುದೆಂದರೆ ಅವನಿಗೆ ಅರಣ್ಯದ ಹೊರತು ಮತ್ತೇನೂ ತಿಳಿಯದು. ಅರಣ್ಯ ವನ್ನು ಬಿಟ್ಟಾಗಲಿಂದ ಮತ್ತೆ ಅಲ್ಲಿಗೆ ಬರುವವರೆ ವಿಗೆ ಅವನಿಗೆಲ್ಲಾ ವಿಲಕ್ಷಣವಾಗಿ ತೋರಿತು.

ಅವರಿಬ್ಬರೂ ಅರಣ್ಯವನ್ನು ಪ್ರವೇಶಿಸಿದ ಕೂಡಲೇ ಅವನಿಗೆ ಮತ್ತೆ ಲವಲವಿಕೆ ಬಂತು. ಅವನು ಅಲ್ಲಿದ್ದ ಮರಗಳನ್ನೇರಿ ಹಣ್ಣುಹಂಪಲು ಗಳನ್ನು ಕಿತ್ತು ತಾನೂ ತಿನ್ನುತ್ತಾ ಮಂತ್ರಿಗೂ ಕೊಡುತ್ತಿದ್ದನು. ಅದನ್ನು ಕಂಡು ಸುಬುದ್ಧಿಗೆ ಅವನಮೇಲೆ ಮತ್ತಷ್ಟುಮರುಕವುಂಟಾಯಿತು.

'ನನ್ನ ಕೈಯಾರ ಈ ಹುಡುಗನನ್ನು ಕೊಲ್ಲ ಲಾರೆ. ಅತ್ತ ರಾಜನ ಮಾತನ್ನೂ ಮೀರು ವಂತಿಲ್ಲ. ಆದುದರಿಂದ ಇವನು ಸತ್ತುಹೋಗು ವಂತೆ ಯಾವುದಾದರೊಂದು ಉಪಾಯ ಯೋಚಿಸಬೇಕು' ಎಂದುಕೊಂಡ ಮಂತ್ರಿ. ಮರುಕ್ಷಣವೇ ಆತನಿಗೊಂದು ಉಪಾಯ ಹೊಳೆಯಿತು. ಆತನು ತಲೆಯೆತ್ತಿ ನೋಡಲು ಕೊಂಚದೂರದಲ್ಲಿ ವಾಸುಕಿಪರ್ವತ ಕಾಣಿ ಸಿತು. ಆ ಪರ್ವತದಮೇಲೆ ಒಂದು ಸರೋ ವರವಿದೆ. ಅದನ್ನು ವಾಸುಕಿ ಸರೋವರವೆಂದು ಕರೆಯುವರು. ಆ ಸರೋವರದಬಳಿಗೆ ಹೋದ ವರು ಯಾರೂ ಜೀವದೊಂದಿಗೆ ಹಿಂತಿರುಗಿರ ಲಿಲ್ಲ. ಆ ಸರೋವರದಲ್ಲಿ ಕಾಲಿಟ್ಟವರನ್ನು ವಾಸುಕಿ ಎಂಬ ಸರ್ಪರಾಜನು ಎಳೆದೊಯ್ಯುವ ನೆಂದು ಪ್ರತೀತಿಯಿತ್ತು.

ಸುಬುದ್ಧಿ ಬೇಡರ ಯುವಕನೊಂದಿಗೆ "ಎಲೈ, ನಿನ್ನಿಂದ ನನಗೊಂದು ಕೆಲಸವಾಗ ಬೇಕಾಗಿದೆ. ಅಲ್ಲಿ ಕಾಣಿಸುತ್ತಿರುವ ಪರ್ವತಕ್ಕೆ ಹೋಗಿ, ಅದರ ಮೇಲಿರುವ ಸರೋವರದಿಂದ ನೀನು ಹೊರುವಷ್ಟು ಮರಳು ಮತ್ತು ಗುಂಡು ಕಲ್ಲುಗಳನ್ನು ತೆಗೆದುಕೊಂಡು ಬಾ. ನಿನಗೆ ಭಾರಿಬಹುಮಾನ ಕೊಡುತ್ತೇನೆ" ಎಂದನು.

"ಅಷ್ಟರತನಕ ನೀವಿಲ್ಲೇ ಇರುವಿರಾ ಸ್ವಾಮಿ" ಎಂದು ಕೇಳಿದ ಆ ಹುಡುಗ.





"ನಾವು ಹೋಗಿದ್ದೆವೆಲ್ಲಾ ಆ ನಗರಕ್ಕೆ ಬಾ. ಇದೋ ನನ್ನ ಉಂಗುರವನ್ನು ನಿನ್ನಬಳಿ ಯಿಟ್ಟುಕೊ. ಆ ನಗರಕ್ಕೆಬಂದು ಈ ಉಂಗುರ ತೋರಿಸಿದರೆ ಯಾರಾದರೂ ನಿನ್ನನ್ನು ನನ್ನ ಬಳಿಗೆ ಕರೆದುಕೊಂಡು ಬರುತ್ತಾರೆ. ಇದೋ, ಈ ಹಣ ನಿನ್ನಬಳಿಯಿರಲಿ" ಎಂದು ಹೇಳಿ, ಸುಬುದ್ಧಿ ತನ್ನ ಕಿರುಬೆರಳಲ್ಲಿದ್ದ ಉಂಗುರವನ್ನು ತೆಗೆದು ಅವನ ನಡುಬೆರಳಿಗೆ ಹಾಕಿ, ಅವನ ಕೈಯಲ್ಲೊಂದು ಚಿನ್ನದನಾಣ್ಯವನ್ನಿಟ್ಟನು.

ಅವುಗಳನ್ನು ತೆಗೆದುಕೊಂಡು ಬೇಡರ ಹುಡುಗನು ಉತ್ಸಾಹದಿಂದ ವಾಸುಕಿ ಪರ್ವತದಕಡೆ ಹೊರಟನು. ಪರ್ವತವನ್ನು ಸೇರಲು ಅವನಿಗೆ ಮೂರು ದಿನಗಳಾದುವು. ಆದರೆ ದಾರಿಯುದ್ದಕ್ಕೂ ಅರಣ್ಯವಿದ್ದುದರಿಂದ ಅವನು ಲೀಲಾಜಾಲವಾಗಿ ನಡೆದುಬಿಟ್ಟನು. ವಾಸುಕಿಪರ್ವತವನ್ನು ಸೇರಿ, ಸರೋವರವಿದ್ದ ಸ್ಥಳಕ್ಕೆಹೋದನು.

ಮೂರುದಿನಗಳ ಪ್ರಯಾಣಕ್ಕಿಂತ ಅವನಿಗೆ ಪರ್ವತವನ್ನು ಹತ್ತುವುದು ತುಂಬಾ ಶ್ರಮ ವೆನಿಸಿತು. ಬಿಸಿಲು ಬಹಳ ವಿಪರೀತವಾಗಿತ್ತು. ಸರೋವರ ಕಾಣಿಸಿದಕೂಡಲೇ ಅವನಿಗೆ ಜೀವ ಬಂದಂತಾಯಿತು. ಅವನು ಒಮ್ಮೆಗೇ ನೀರಿಗೆ ಹಾರಿ, ಸುಮಾರುಸಮಯ ಈಜಾಡುತ್ತಿದ್ದನು. ಅದೃಷ್ಟವಶಾತ್ ವಾಸುಕಿಯಾಗಲೀ, ಇತರೇ ಸರ್ಪಗಳಾಗಲೀ ಅವನನ್ನು ನುಂಗಿಬಿಡಲಿಲ್ಲ.

ಸರೋವರದಲ್ಲಿ ಮನಸ್ಸು ಬಂದಷ್ಟು ಹೊತ್ತು ಈಜಿದನು. ಸರೋವರದ ತಳಕ್ಕೆ ಹೋಗಿ ಯಥೇಚ್ಛವಾಗಿ ಮರಳು ಮತ್ತು





ದುಂಡು ಕಲ್ಲುಗಳನ್ನು ತಂದು ದಡದಲ್ಲಿ ರಾಶಿ ಹಾಕಿದನು. ನಂತರ ಅದನ್ನು ತನ್ನ ಅಂಗಿಯಲ್ಲಿ ಮೂಟೆ ಕಟ್ಟಿಕೊಂಡನು. ಅವನಿಗೆ ಎರಡು ವಿಷಯುಗಳು ಆಶ್ಚರ್ಯವನ್ನುಂಟು ಮಾಡಿದುವು. ಸದಾ ಕಪ್ಪು ಬಣ್ಣವಾಗಿದ್ದ ತನ್ನ ಕೈಗಳು ಹಳದಿ ಬಣ್ಣವನ್ನು ತಾಳಿದ್ದುವು. ಸೂಕ್ಷ್ಮವಾಗಿ ನೋಡಲು ತನ್ನ ಶರೀರವೆಲ್ಲಾ ಹಳದಿಬಣ್ಣ ತಿರುಗಿದ್ದಿತು. ಮತ್ತೊಂದು ಆಶ್ಚರ್ಯಕರವಾದ ವಿಷಯವೆಂದರೆ ಆ ಸರಸ್ಸಿನಿಂದ ಎತ್ತಿಕೊಂಡುಬಂದ ಮರಳು ಮತ್ತು ದುಂಡುಗಲ್ಲುಗಳು ಅಪೂರ್ವ ಕಾಂತಿಯಿಂದ ಬೆಳಗುತ್ತಿದ್ದುವು, "ಅಂತಲೇ ಆ ಮುದುಕಪ್ಪ ಇವುಗಳನ್ನು ತರುವಂತೆ ನನಗೆ ಹೇಳಿದನು" ಎಂದುಕೊಂಡ ಬೇಡರ ಯುವಕ.

ಇನ್ನು ತಾನು ಆ ಗಣ್ಯಮನುಷ್ಯನಬಳಿಗೆ ಹೋಗಬೇಕು. ಅವನು ಸರೋವರದದಡದಲ್ಲಿದ್ದ ಒಂದು ಬಂಡೆಯನ್ನೇರಿ ಸುತ್ತಲೂ ನೋಡಿದನು. ಪರ್ವತದ ತಪ್ಪಲಲ್ಲಿ ಒಂದು ನಗರ ಕಾಣಿಸಿತು. ಅವನು ತನ್ನ ಜೀವಮಾನದಲ್ಲಿ ನೋಡಿರುವುದೇ ಒಂದು ಪಟ್ಟಣ. ಅದುದರಿಂದ ಈ ನಗರವು ಅದೇ ಎಂದು ಭಾವಿಸಿ, ಗಬಗಬನೆ ಪರ್ವತದಿಂದ ಇಳಿದು ಆ ನಗರವನ್ನು ಪ್ರವೇಶಿಸಿದನು.

ತನ್ನ ಬೆರಳಲ್ಲಿದ್ದ ಉಂಗುರವನ್ನು ಎಷ್ಟು ಜನಕ್ಕೆ ತೋರಿಸಿದರೂ ಯಾರೂ ಗುರುತು ಹಿಡಿಯಲಿಲ್ಲ. ಅವನಿಗೆ ಹಸಿವು ವಿಪರೀತವಾಯಿತು. ಮಂತ್ರಿಕೊಟ್ಟ ನಾಣ್ಯದಿಂದ ತಿಂಡಿತೀರ್ಥಗಳನ್ನು ತೆಗೆದುಕೊಂಡನು. ತರುವಾಯ







ಕೊಂಡು ಬೇಡರ ಯುವಕನು ತನ್ನ ಮೂಟೆಯಿಂದ ಒಂದೇಒಂದು ಸಣ್ಣಬಣ್ಣದಕಲ್ಲನ್ನು ತೆಗೆದುಕೊಂಡು, ಅಂಗಡಿಗೆಹೋಗಿ, "ಅಯ್ಯಾ ಇದಕ್ಕೆಷ್ಟು ಕೊಡುವಿರಿ?" ಎಂದು ಕೇಳಿದನು.

ಅಂಗಡಿಯವನು ಆ ಕಲ್ಲನ್ನು ಮತ್ತೆ ಮತ್ತೆ ತಿರುಗಿಸಿ ನೋಡಿ, ಒಂದುಸಾರಿ ಆ ಯುವಕನನ್ನುಕೂಡಾ ಆಪಾದಮಸ್ತಕ ಪರ್ಯಂತ ನೋಡಿದನು.

"ಈ ಹುಡುಗನನ್ನು ನೋಡಿದರೆ ಬಡವನಂತೆ ಕಾಣಬಂದರೂ ವಾಸ್ತವವಾಗಿ ಒಬ್ಬ ರಾಜಕುಮಾರನಿರಬೇಕು. ಇಲ್ಲದಿದ್ದರೆ ಇಷ್ಟೊಂದು ಬೆಲೆಬಾಳುವ ರತ್ನ ಎಲ್ಲಿಂದ ಸಿಗಬೇಕು?" ಎಂದುಕೊಂಡು ಅಂಗಡಿಯವನು "ಮುನ್ನೂರು ವರಹಗಳನ್ನು ಕೊಡುತ್ತೇನೆ. ಅದಕ್ಕಿಂತಲೂ ಹೆಚ್ಚು ಕೊಡಲು ನನ್ನಿಂದ ಸಾಧ್ಯವಿಲ್ಲ" ಎಂದನು.

ಯುವಕನು ತನ್ನ ಕಿವಿಗಳನ್ನು ತಾನೇ ನಂಬಲಾರದಾದನು. "ಏನು ಮುನ್ನೂರು ವರಹಗಳೇ?" ಎಂದ ಬೆರಗಾಗಿ. ಗಿರಾಕಿ ಎಲ್ಲಿ ತಪ್ಪಿ ಹೋಗುವುದೋ ಎಂದು ಹೆದರಿ ಅಂಗಡಿಯವನು "ಹೋಗಲಿ, ಇನ್ನೊಂದು ನೂರು ಹೆಚ್ಚಾಗಿ ಕೊಡುತ್ತೇನೆ. ಈ ಕಲ್ಲು ಅದಕ್ಕಿಂತಲೂ ಹೆಚ್ಚು ಬೆಲೆಬಾಳದು" ಎಂದ.

ಅಂಗಡಿಯವನು ತನ್ನೊಂದಿಗೆ ತಮಾಷೆ ಮಾಡುತ್ತಿರುವನೆಂದು ಆ ಬೇಡರ ಯುವಕನು "ನನ್ನೊಂದಿಗೆ ಪರಿಹಾಸವೇಕೆ? ಖಂಡಿತವಾಗಿ ಕೊಡುವುದನ್ನು ಹೇಳಿಬಿಡು" ಎಂದ.

ಅವನು ಆ ನಗರವನ್ನು ಬಿಟ್ಟು ರಾಜದಾರಿಯಲ್ಲಿ ಹೊರಟು ಮತ್ತೊಂದು ದೊಡ್ಡದಾದ ನಗರವನ್ನು ಪ್ರವೇಶಿಸಿದನು.

ಅಲ್ಲಿಯುಸಹ ಅವನಬಳಿಯಿದ್ದ ಉಂಗುರವನ್ನು ಯಾರೂ ಗುರುತಿಸಲಿಲ್ಲ. ಅವನಿಗೆ ಹಸಿವಾಗುತಿತ್ತು. ಕೈಯಲ್ಲಿ ಹಣವಿಲ್ಲ. 'ಈ ದುಂಡುಕಲ್ಲನ್ನು ಕೊಟ್ಟರೆ ಯಾರಾದರೂ ಹಣ ಕೊಡುವರೇನೋ ನೋಡೋಣ! ಯಾವಾಗಲೂ ಸ್ಥಿತಿವಂತರು ಬೆಲೆಯಿಲ್ಲದ ವಸ್ತುಗಳ ಕಡೆ ಗಮನ ಕೊಡುವುದಿಲ್ಲ. ಈ ಕಲ್ಲುಗಳಿಗೆ ಬೆಲೆ ಇರಬಹುದು. ಎಂತಲೇ ಆ ಮುದುಕನು ಇದನ್ನು ತಂದು ಕೊಡುವಂತೆ ಹೇಳಿದನು! ಒಂದು ಸಣ್ಣಕಲ್ಲನ್ನು ಮಾರಿದರೆ ಅವರಿಗೆ ಆಗುವ ನಷ್ಟವಾದರೂ ಏನು?" ಎಂದು



"ಎಲ ಎಲಾ, ಒಳ್ಳೇ ಪೇಚಾಟವಾಯಿತಲ್ಲಾ. ಐನೂರು ವರಹಗಳನ್ನು ತೆಗೆದುಕೊ. ಚೌಕಾಶಿ ಮಾಡಬೇಡ" ಎಂದು ಹೇಳಿ ಚೀಲದಿಂದ ಐನೂರು ವರಹಗಳನ್ನು ತೆಗೆದು ಬೇಡರ ಯುವಕನಿಗೆ ಕೊಟ್ಟನು.

ತನ್ನ ಹತ್ತಿರವಿರುವ ಕಲ್ಲುಗಳನ್ನೆಲ್ಲಾ ಮಾರಿದರೆ ಅಪಾರ ಧನಗಳಿಸಬಹುದೆಂದು ಯುವಕನು ಅರಿತುಕೊಂಡನು.

ಆ ಮುದುಕನಿಗಾಗಿ ಎಷ್ಟು ಊರುಗಳನ್ನು ಸುತ್ತಲಿ? ಇಷ್ಟೆಲ್ಲಾ ಪಾಡು ಪಟ್ಟು ಇದನ್ನು ಆತನಿಗೆ ಕೊಡುವುದು ಹೊರತು ನನಗೆ ಬಂದ ಭಾಗ್ಯವೇನು? ಕೆಲವು ಕಲ್ಲುಗಳನ್ನು ಮಾರಿ ಈ ನಗರದಲ್ಲಿ ಒಂದು ಮನೆ ಕಟ್ಟಿಕೊಂಡು ಸ್ಥಿರವಾಗಿ ನೆಲಸುವುದು ಉತ್ತಮ" ಎಂದು ಯೋಚಿಸಿದ ಆ ಹುಡುಗ.

ಅವನು ಕೂಡಲೇ ಪೇಟೆಗೆಹೋಗಿ ತನಗಾಗಿ ಕೆಲವು ಬಟ್ಟೆಗಳನ್ನು ಹೊಲಿಸಿಕೊಂಡನು. ಕ್ರಮೇಣ ಒಂದು ಭಾರಿಭವನವನ್ನು ಕಟ್ಟಿಸಿಕೊಂಡು ರತ್ನರಾಜನೆಂಬ ಹೆಸರಿನಿಂದ ಸುಖವಾಗಿ ಜೀವಿಸುತ್ತಿದ್ದನು.

ರತ್ನರಾಜನ ಅಂದಚೆಂದಗಳನ್ನು ಕುರಿತು, ಸಂಪತ್ತನ್ನು ಕುರಿತು ಜನರಾಡಿಕೊಳ್ಳುತ್ತಿದ್ದ ಸುದ್ದಿ ಉಗ್ರಸೇನ ಮಹಾರಾಜನ ಕಿವಿಗೆಬಿತ್ತು. ಆತನು ಸುಬುದ್ಧಿಯೊಂದಿಗೆ "ಮಂತ್ರಿಗಳೇ, ಇಲ್ಲಿಗೆ ಹನ್ನೆರಡು ಗ್ರಾವುದದೂರದಲ್ಲಿ ರತ್ನರಾಜನೆಂಬಾತನಿರುವನಂತೆ. ಆತನು ಒಂದುವೇಳೆ ಅವಿವಾಹಿತನಾಗಿದ್ದರೆ ನಮ್ಮ ರಾಜ



ಕುಮಾರಿಗೆ ಅನುರೂಪನಾಗಿರುವನೇನೋ. ಒಮ್ಮೆಹೋಗಿ ಕಂಡು ಬನ್ನಿ" ಎಂದನು.

ಸುಬುದ್ಧಿ ತನ್ನ ಪರಿವಾರದೊಂದಿಗೆ ಹೊರಟು ರತ್ನರಾಜನ ಭೇಟಿಮಾಡಿದನು. ಒಬ್ಬೊರನ್ನೊಬ್ಬರು ಕಂಡರೂ ಈಗ ಗುರುತು ಹಿಡಿಯಲಾರದಾದರು.

"ನಮ್ಮ ರಾಜರಿಗೆ ಲಾವಣ್ಯವತಿಯಾದ ಮಗಳಿದ್ದಾಳೆ. ಆಕೆಗೆ ನೀವೇ ತಕ್ಕವರನೆಂದು ನನಗೆ ತೋರುತ್ತದೆ. ವಿವಾಹಕ್ಕೆ ಏರ್ಪಾಟು ಮಾಡಲೇ?" ಎಂದು ಕೇಳಿದ ಮಂತ್ರಿ.

ರತ್ನರಾಜನು ಸಮ್ಮತಿಸಿದನು. ಸುಬುದ್ಧಿ ಆತನನ್ನು ಸಂಗಡ ಕರೆದುಕೊಂಡು ತಮ್ಮ ದೇಶಕ್ಕೆ ಹೋಗಿ ಅರಮನೆಯ ಪ್ರಾಂಗಣದಲ್ಲಿದ್ದ ಬಿಡಾರದಲ್ಲಿ ಅವನನ್ನು ತಂಗುವಂತೆ ಏರ್ಪಡಿ

ಸಿದನು. ರಾಜ ಕುಟುಂಬದವರು ರತ್ನರಾಜನನ್ನು ಕಂಡು "ರಾಜಕುಮಾರಿಗೆ ಈತನಿಗಿಂತಲೂ ಉತ್ತಮ ವರನು ಇನ್ನೆಲ್ಲಿಯೂ ಸಿಗಲಾರ" ಎಂದರು.

ರಾಜನಿಗೂ ಹಾಗೇ ತೋರಿತು. ರಾಜನು ತನ್ನ ಮಂತ್ರಿ, ರಾಜಪುರೋಹಿತರನ್ನು ಕರೆಯಿಸಿ "ಮದುಮಗನ ಜಾತಕ ನೋಡಿ ವಿವಾಹಕ್ಕೆ ಶುಭವಾದ ಮುಹೂರ್ತವನ್ನು ನಿಶ್ಚಯಿಸಿರಿ" ಎಂದನು.

ಸುಬುದ್ಧಿ ರತ್ನರಾಜನಬಳಿಗೆ ಹೋಗಿ "ಅಯ್ಯಾ, ತಮ್ಮ ಜಾತಕ ಕೊಡಿಸಿಕೊಡಿ. ನಿಮ್ಮ ತಂದೆಯವರು ಯಾರು? ನಿಮ್ಮ ವಂಶ ಯಾವುದು? ಆ ವಿಷಯಗಳನ್ನು ತಿಳಿಯಬೇಕಾದ ಅಗತ್ಯ ಈಗ ಬಂದಿದೆ" ಎಂದನು.

"ಮಂತ್ರಿಗಳೇ, ನಾನೊಬ್ಬವ್ಯಾಧನು. ನನ್ನನ್ನು ಎಲ್ಲರು ರತ್ನರಾಜನೆಂದು ಕರೆಯುವರೇ ಹೊರತು ನನ್ನ ಅಸಲು ಹೆಸರು ಕುರರವಟ್" ಎಂದ ಆ ಯುವಕ.

ಆ ಹೆಸರು ಕೇಳಿ ಮಂತ್ರಿ ಸ್ತಂಭಿತನಾದನು. ಆ ಯುವಕನು ತನ್ನ ವಿಷಯವನ್ನೆಲ್ಲಾ ಹೇಳಿ ತನ್ನ ಬೆರಳಲ್ಲಿದ್ದ ಉಂಗುರವನ್ನು ತೋರಿಸಿದನು. ಸುಬುದ್ಧಿಗೆ ಆಗ ಅವನ ಮಾತಿನಲ್ಲಿ ನಂಬಿಕೆಯುಂಟಾಯಿತು. ಆತನು ಕೂಡಲೇ ರಾಜನಬಳಿ ಸಾರಿ "ಮಹಾಪ್ರಭು, ಮನೆ ಹಾಳಾಯಿತು. ಈ ರತ್ನರಾಜನೇ ಅಂದು ನಾನು ನಿಮ್ಮಬಳಿಗೆ ಕರೆತಂದ ವ್ಯಾಧ ಯುವಕನು. ಈಗೇನು ಮಾಡೋಣ?" ಎಂದು ಅವನ ಹಿಂದಿನ ಕಥೆಯನ್ನು ತಿಳಿಸಿದನು.

ರಾಜನು ಸಾವಧಾನಚಿತ್ತದಿಂದ ಕೇಳಿ "ಆ ಮುದಿಬ್ರಹ್ಮ ಸಾಮಾನ್ಯನಲ್ಲ. ಅವನು ಹಾಕಿದ ಗಂಟನ್ನು ತಪ್ಪಿಸಲು ನಮ್ಮಿಂದ ಸಾಧ್ಯವೇ? ಮುಹೂರ್ತವಿಡಿಸಿ ಮದುವೆಮಾಡಿ ಮುಗಿಸೋಣ" ಎಂದ.

ಅದೇಪ್ರಕಾರ ರತ್ನರಾಜ ಮತ್ತು ಮಾಧವಿಯರ ಮದುವೆ ವೈಭವದಿಂದ ನಡೆಯಿತು. ಈ ಮದುವೆ ನೋಡಿ ಹರ್ಷಿಸದ ಜನರಿಲ್ಲ. "ಅಂತೂ ಉಗ್ರಸೇನ ಮಹಾರಾಜನು ಪ್ರಚಂಡ. ತನ್ನ ಮಗಳಿಗೆ ಅನುರೂಪನಾದ ವರನನ್ನು ಹುಡುಕಿ ತಂದು ಮದುವೆಮಾಡಿದನು" ಎಂದು ಜನರಾಡಿಕೊಂಡರು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. 10

1958 ಜೂಲೈ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಮೇ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು - 26.**

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ಕಾಲಿಲ್ಲದಿದ್ದರೂ ಎದ್ದುನಿಂತು ಆಡಬಲ್ಲುವು!

ಎರಡನೇ ಫೋಟೋ: ಕೈಯಿಲ್ಲದಿದ್ದರೂ ಎತ್ತಿಕೊಂಡು ತಿನ್ನಬಲ್ಲುವು!

ಕಳಿಸಿದವರು: ಕೆ. ಟಿ. ಅನಂತರೆಡ್ಡಿ,

S/o ಕಟ್ಟಾ ತಿಮ್ಮಪ್ಪ, ದೊ. ಸಿ. ಹಳ್ಳಿ, ಚಿತ್ರದುರ್ಗ, ಮೈಸೂರು.

**ಬಹುಮಾನ ರೂ. 10/- ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**

# ವಿಚಿತ್ರ ಪಕ್ಷಿ

ಕೀವೀ ಎಂಬ ವಿಚಿತ್ರಪಕ್ಷಿ ನ್ಯೂಜೀಲಾಂಡ್ ದೇಶದಲ್ಲಿದೆ. ಈ ಪಕ್ಷಿಯನ್ನು ಕುರಿತು ಬ್ರಿಟಿಷ್ ಶಾಸ್ತ್ರವೇತ್ತರು ೧೮೧೩ ರಲ್ಲಿ ಮೊತ್ತಮೊದಲು ಕೇಳಿದರು. ಅದೊಂದು ಅತೀ ವಿಲಕ್ಷಣ ಪಕ್ಷಿ.



ಕೀವೀಪಕ್ಷಿಗೆ ಬೆಕ್ಕಿನಂತೆ ಮೀಸೆಯಿದೆ. ಬಾಲವಿಲ್ಲ. ನಾಮಮಾತ್ರವಾದ ರೆಕ್ಕೆ. ರೆಕ್ಕೆಯ ನೀಳ ಒಂದೇ ಅಂಗುಲ. ಏನೂ ಉಪಯೋಗವಿಲ್ಲದ ಈ ರೆಕ್ಕೆಗಳನ್ನು ಈ ಹಕ್ಕಿ ತನ್ನ ಮೃದುವಾದ ಗರಿಗಳೊಳಗೆ ಅಡಗಿಸಿ ಕೊಳ್ಳುತ್ತದೆ. ಈ ಪಕ್ಷಿಯ ಕೊಕ್ಕು ಉದ್ದವಾಗಿ ಬಾವಾಗಿದೆ. ಅದರ ಕೊನೆಯಲ್ಲಿ ಮೂಗಿನ ಎರಡು ಸೊಳ್ಳೆಗಳಿವೆ!

ಎಲ್ಲಕ್ಕಿಂತ ವಿಚಿತ್ರವೆಂದರೆ, ಈ ಪಕ್ಷಿ ಇಡುವ ಮೊಟ್ಟೆ, ಪಕ್ಷಿಯ ಭಾರದೊಂದಿಗೆ ಹೋಲಿಸಿದರೆ ಬಹಳ ದೊಡ್ಡದು. ಪಕ್ಷಿಯ ಭಾರ ನಾಲ್ಕು ಪೌಂಡಿಗಳಿದ್ದರೆ ಮೊಟ್ಟೆಯ ಭಾರ ಒಂದು ಪೌಂಡಿರುತ್ತದೆ. (ಕೀವೀ ಉಷ್ಟ್ರ ಪಕ್ಷಿಜಾತಿಗೆ ಸೇರಿದ ಪ್ರಾಣಿ. ಕೀವೀಯ ಮೊಟ್ಟೆಯ ಲೆಕ್ಕದಲ್ಲಿ ಉಷ್ಟ್ರ ಪಕ್ಷಿಕೂಡಾ ಮೊಟ್ಟೆಯಿಟ್ಟರೆ ಅದರ ಮೊಟ್ಟೆ ೭೫ ಪೌಂಡಿರಬೇಕು!)

ಕೀವೀಯ ಮೊಟ್ಟೆಗಳನ್ನು ಗಂಡು ಪಕ್ಷಿಗಳು ಕಾವುಕೊಡುತ್ತವೆ. ಮರಿಯ ಆಹಾರ ಮರಿಯೇ ನೋಡಿಕೊಳ್ಳಬೇಕು.

ಹಾರಲಾರದ ಈ ಪಕ್ಷಿ ಸದ್ದಿಲ್ಲದೆ ವೇಗವಾಗಿ ಓಡಬಲ್ಲುದು. ಕೀವೀಗೆ ಕಣ್ಣು ಮಂದ. ಹಗಲಿನಲ್ಲಿ ಒಂದಡಿಗಿಂತ ಹೆಚ್ಚು ದೂರ ಕಾಣಿಸಲಾರದು. ಕತ್ತಲೆಯಲ್ಲಿ

ಐದಾರಡಿಯಷ್ಟುದೂರ ನೋಡಬಲ್ಲುದು. ಆದರೆ ಕೇಳುವ ಶಕ್ತಿಯೂ, ವಾಸನೆಯ ಶಕ್ತಿಯೂ ಹೆಚ್ಚಾಗಿವೆ. ಅದರ ಮೂಗು ಸ್ಪರ್ಶೇಂದ್ರಿಯವಾಗಿದೆ. ರಾತ್ರಿಯಲ್ಲಿ ಇದು 'ಕೀ—ವೀ' ಎಂದು ಕೂಗುತ್ತದೆ. ಅಂತೆಯೇ ಇದಕ್ಕೆ ಈ ಹೆಸರು.

ಕೀವೀ ಪೊದೆಗಳಲ್ಲಿ ತನ್ನ ಆಹಾರ ಸಂಪಾದಿಸುತ್ತದೆ. ಅದರ ಕಾಲುಗಳಿಗೆ ಹದನಾದ ಉಗುರುಗಳಿವೆ. ಅವುಗಳಿಂದ ಅದು ಮಣ್ಣುತೋಡಿ ಬಿಲ ಮಾಡಿಕೊಳ್ಳುತ್ತದೆ. ಅದಕ್ಕೆ ಎರೆ ಹುಳುಗಳೆಂದರೆ ಬಹಳ ಇಷ್ಟ. ಅದನ್ನು ಹಿಡಿಯಲು ಅದು ಕಾಲಿನಿಂದ ನೆಲವನ್ನು ತಟ್ಟಿ ಸದ್ದುಮಾಡುತ್ತದೆ. ನೆಲವು ಟೊಳ್ಳಾಗಿದ್ದಲ್ಲಿ ಕೊಕ್ಕಿನಿಂದ ಚುಚ್ಚಿ ಎರೆ ಹುಳುವನ್ನು ಮೇಲಕ್ಕೆಳೆಯುತ್ತದೆ. ಇನ್ನು ನತ್ತೆ ಮತ್ತು ಇತರ ಕೀಟಗಳನ್ನೂ, ಪೊದೆಗಳಲ್ಲಿ ಸಿಕ್ಕುವ ಕಾಯಿಗಳನ್ನೂ ತಿನ್ನುತ್ತದೆ.

ನ್ಯೂಜೀಲಾಂಡಿನ ಆದಿಮವಾಸಿಗಳು ಗರಿಗಳಿಗಾಗಿ ಈ ಹಕ್ಕಿಯನ್ನು ಕೊಲ್ಲುತ್ತಾರೆ. ಹೀಗೆ ಈ ಪಕ್ಷಿಜಾತಿ ಅಂತರಿಸುವ ದಶೆಬಂತು. ೧೯ ನೇ ಶತಾಬ್ದದಲ್ಲಿ ಅಲ್ಲಿಗೆ ವಲಸೆಬಂದ ಬಿಳಿಜನರೂ ಆಹಾರಕ್ಕಾಗಿ ಅದನ್ನು ಬೇಟೆಯಾಡಿದರು.

ಈ ಪಕ್ಷಿಗಳ ವಂಶವನ್ನು ವೃದ್ಧಿ ಗೊಳಿಸುವ ಪ್ರಯತ್ನವು ಸಾಗುತ್ತಿದ್ದರೂ, ಅಷ್ಟೇನೂ ಫಲಕಾರಿಯಾಗಲಿಲ್ಲ.



# ಎಲ್ಲರಿಗೂ ಒಂದೇ ನ್ಯಾಯ!

ಒಬ್ಬ ಗ್ರಾಮಾಧಿಕಾರಿಯ ಕೈಕೆಳಗೆ ಒಬ್ಬ ಗೋವಳನಿದ್ದ. ಅವನಿಗೊಂದು ಹಸು ವಿತ್ತು. ಆತ ತನ್ನ ಹಸುವನ್ನು ಯಜಮಾನನ ಹಸುಗಳೊಂದಿಗೆ ಮೇಯಿಸಲು ಹೊಡೆದುಕೊಂಡು ಹೋಗುತಿದ್ದ.

ಒಂದುದಿನ ಗ್ರಾಮಾಧಿಕಾರಿಯ ಹಸುವೊಂದು ಗೋವಳನ ಹಸುವಿನೊಂದಿಗೆ ಜಗಳಾಡಿತು. ಎರಡೂ ಕಠಿನವಾಗಿ ಹಾಯ್ದುಕೊಂಡುವು. ಕಡೆಗೆ ಗೋವಳನ ಹಸು ಯಜಮಾನನ ಹಸುವನ್ನು ಕೊಂದುಹಾಕಿತು.

ಗೋವಳನು ಕೂಡಲೇ ಗ್ರಾಮಾಧಿಕಾರಿಯಬಳಿಗೆ ಹೋಗಿ, "ಅಯ್ಯಾ, ನಿಮ್ಮ ಹಸು ನನ್ನ ಹಸುವಿನೊಂದಿಗೆ ಹೋರಾಡಿ ಕೊಂದು ಹಾಕಿದರೆ ನ್ಯಾಯವಾಗಿ ಅದಕ್ಕೆ ಪರಿಹಾರವೇನು ಸ್ವಾಮಿ?" ಎಂದು ಕೇಳಿದ.

ಕೂಡಲೇ ಗ್ರಾಮಾಧಿಕಾರಿ, "ಅದಕ್ಕೇನೂ ಪರಿಹಾರವಿಲ್ಲಬಿಡು. ಜಗಳ ಮಾಡುವುದೂ ಕೊಲ್ಲುವುದೂ ಪಶುಧರ್ಮತಾನೇ!" ಅಂದ.

"ಓ! ಬದುಕಿದೆ. ಹೆದರಿಕೆಯಿಂದ ನಾಲಗೆ ತಡವರಿಸಿತು ಸ್ವಾಮಿ. ನನ್ನ ಹಸು ನಿಮ್ಮ ಹಸುವನ್ನು ಕೊಂದಿತು. ನೀವೆಲ್ಲಿ ಪರಿಹಾರ ಕೇಳುವಿರೋ ಎಂದು ಹೆದರಿದೆ. ಕಾಪಾಡಿದಿರಿ ಸ್ವಾಮಿ!" ಅಂದ ಗೋವಳ.



## ಒಗಟುಗಳು

೧. ಜೇಡಿ ಗುಡ್ಡೆಯಮೇಲೆ ಜಡೆಬೈರಾಗಿ ಕುಣಿಯುತ್ತಾನೆ.

೨. ಕೆಂಪನೆ ಹುಡುಗಿ ಸಣ್ಣನೆ ಹೆಣ್ಣಾದರೂ ರಾಜನನ್ನೇ ಅಳಿಸಿಬಿಟ್ಟಾಳು!

೩. ಒಳಸೀ ಹೊರಸೀ ಮೈಯೆಲ್ಲಾಸೀ ನಮ್ಮ ಬೆಳ್ಳಪ್ಪಂದು.

೪. ಎಲೆಯಿಲ್ಲ ಕೊಂಬೆಯಿಲ್ಲ, ಮರಮಾತ್ರ ಬೆಳೆಯುತ್ತದೆ.

೫. ಗಿಡಿಯನ್ನು ಜಜ್ಜಿದರೆ ಮನೆತುಂಬಾ ಮುತ್ತು ಹರಡಿತು.

೬. ಬೆಳ್ಳಿಲಂಗದ ಸುಂದರಿಗೆ ಮೈಯೊಳಗೆ ತುಂಬಾ ಚಿನ್ನ.

೭. ಗೂಟದಮೇಲೆ ಗುಮಣ್ಣ ಕೂತು ಕೊಂಡು ಬಂದವರಿಗೆಲ್ಲಾ ಹಿಂದಿನಿಂದ ಪ್ರಸಾದ ಕೊಡ್ತಾನೆ.

೮. ಬೆಳ್ಳಿಯ ಹುಡುಗಿ ಹಿಡಿದರೆ ಜಾರುತ್ತಾಳೆ.

—ಎ. ಕೆ. ಲಕ್ಷ್ಮೀನಾರಾಯಣ ಸೆಟ್ಟಿ

೯. ಮುಂದೆ ನೋಡು ಅಂಗಾತ ಬಿದ್ದಿದ್ದಾನೆ ರೋಮದಪ್ಪ; ಬಂದವರ ಹೋದವರ ಅಂಗಾಲು ನೆಕ್ಕುತ್ತಾನೆ ಈತನಾರಪ್ಪ?

೧೦. ಅರಳು ಹುರಿದೇ, ಅರಳು ಚೆಲ್ಲಿದೇ, ಬೆಳಗಾಗುತಲೇ ಮಕಮಾಯ!

೧೧. ಮುಚ್ಚಿದರೆ ಮುಷ್ಟಿತುಂಬಾ, ಬಿಟ್ಟರೆ ಮನೆತುಂಬ.

—ಎಂ. ವಿಶಾಲಾಕ್ಷಿ.

ಉತ್ತರ:- ೧. ಕಡಗೋಲು. ೨. ಮೆಣಸಿನ ಕಾಯಿ. ೩. ಕಲ್ಲುಸಕ್ಕರೆ. ೪. ಹೊಗೆ. ೫. ಬೆಳ್ಳುಳ್ಳಿ. ೬. ಸಿಗರೇಟು. ೭. ಚೇಳು. ೮. ಪಾದರಸ. ೯. ಚಲ್ಲಣ. ೧೦. ನಕ್ಷತ್ರ. ೧೧. ಟಾರ್ಚ್‌ಲೈಟ್.

## ದುರದೃಷ್ಟ

ಬಿದ್ದಿದೆ ನೋಟೊಂದು ಶತದ
ಸದ್ದಿಲ್ಲದೆ ಮಧ್ಯದಲಿ ಪಥದ
ಅದೃಷ್ಟಶಾಲಿಗಳ ಕರೆಯುತಿದೆ
ಅದು ಬಿಸಿಲಿನಲಿ ರೋದಿಸುತಿದೆ ॥ ೧ ॥

ಚರ್ಮ ಎಲುವಿಗೆ ಅಂಟಿದೆ
ಅವನ ಅಕ್ಷಿಗೂಡನು ಸೇರಿದೆ
ಸರ್ವ ಮೈಬಲ ಕುಂದಿದೆ
ಗರ್ವ ಯೌವನವ ಮುರಿದಿದೆ ॥ ೨ ॥

ಅಯ್ಯಾ ಧರ್ಮ ಎನ್ನುತಿರುವನು
ಕೈಯ ಕೋಲನು ಊರುತಿರುವನು
ವೇಗ ಹೆಜ್ಜೆಯ ಇಡಲಸಾಧ್ಯನು
ರೋಗ ತುಂಬಿದ ಆ ಭಿಕ್ಷುಕನು ॥ ೩ ॥

ದೂರದಲಿ ಬರುವನು ಧನಿಕ
ಆರು ಹೋಟೇಲುಗಳ ಮಾಲಿಕ
ಅವನಿಗಿಲ್ಲ ದೀನರಲಿ ಮರುಕ
ಅವನ ಬರವ ಕಂಡನು ತಿರುಕ ॥ ೪ ॥

ನೋಟನ್ನು ಪ್ರಥಮ ಕಂಡವ ತಿರುಕ
ನೋಟವನು ಕಂಡನು ತಿರುಕನ ಧನಿಕ
ವೇಗ ಹೆಜ್ಜೆಯ ಇಟ್ಟನು ಧನಿಕ
ಬೇಗದಲಿ ಹೆಕ್ಕಿಕೊಂಡನು ಆ ಚಳಕ ॥ ೫ ॥

ಅಯ್ಯಾ! ಅದಕೊಡಿ ಎಂದನಾತಿರುಕ
ಕೈಯಲಿ ಪೆಟ್ಟೊಂದ ಕೊಟ್ಟನಾಧನಿಕ
ಪಡೆದು ಬಂದಿರಬೇಕು ಅದೃಷ್ಟ
ಪಡೆದಿರುವನು ತಿರುಕ ದುರದೃಷ್ಟ ॥ ೬ ॥

—ಯಸ್ಪಿ ಕೋಟಿಯಾನ್.

# ಚಿತ್ರ ಕಥೆ





ಒಂದುದಿನ ವಾಸು ಮತ್ತು ಗೋಪಿ ಆಡಿಕೊಳ್ಳುತ್ತಿದ್ದರು. ಆಗೊಬ್ಬ ಮಿಠಾಯಿ ಮಾರುವವನು 'ಟೈಗರ'ನ್ನು ಹಿಡಿದು, ಅದನ್ನು ತನ್ನ ಮುಕ್ಕಲಿಗೆಯ ಕಾಲಿಗೆ ಕಟ್ಟಿಬಿಟ್ಟನು. ವಾಸು ಗೋಪಿಯರು ತಮ್ಮ ನಾಯಿಯನ್ನು ಕೇಳಿದಾಗ "ಈ ನಾಯಿ ನಾಲ್ಕಾಣೆಯ ಮಿಠಾಯಿ ತಿಂದಿದೆ; ಆ ದುಡ್ಡು ಕೊಟ್ಟರೇನೇ ಬಿಡುತ್ತೇನೆ" ಅಂದ ಮಿಠಾಯಿಗಾರ. ವಾಸು ಗೋಪಿಯರು ಮಾತಾಡದೆ ದೂರಹೋಗಿ ಟೈಗರನ್ನು ಕರೆದರು. ಕೂಡಲೇ ಅದು ಹಾರಿ ಮುಕ್ಕಲಿಗೆಯೊಂದಿಗೇ ಅವರಬಳಿಗೆ ಓಡಿತು. ಮಿಠಾಯಿ ಹಲಗೆಯೊಂದಿಗೆ ಮಿಠಾಯಿಗಾರನೂ ಬಿದ್ದ!






Printed by B. NAGI REDDI at the B. N. K. Press (Private) Ltd., and Published by him for Chandamama Publications, from Madras 26.—Controlling Editor: SRI 'CHAKRAPANI'





**ಬೇರೆ ಯಾವ ಉಪಾಯವೂ ಫಲಿಸದಿದ್ದರೆ....**



**... ಮ್ಯಾನರ್ಸ್**

**ಗ್ರೈಪ್ ಮಿಕ್ಶ್ಚರ್**

**ಕೊಟ್ಟುನೋಡಿ**

**ಅದು ಪುನಃ ಸಂತೋಷದಿಂದ ನಗುವುದನ್ನು ನೋಡಿರಿ**




ನಮ್ಮ 40 – ಪುಟಗಳ "ಮದರ್‌ಕ್ರಾಪ್ಟ್ ಅಂಡ್ ಚೈಲ್ಡ್ ಕೇರ್" ಎಂಬ ಪುಸ್ತಕವನ್ನು ಪಡೆಯಿರಿ. ನಿಮ್ಮ ವಿಳಾಸವನ್ನೂ ಮತ್ತು ಪ್ರತಿ ಸೀಸೆಯೊಡನೆ ಸಿಗುವ ಒಂದು ಕೂಪನನ್ನೂ 40 ನಯಾ ಪೈಸಗಳ ಸ್ಟಾಂಪಿನೊಂದಿಗೆ ಪೋಸ್ಟ್ ಆಫೀಸ್ ಬಾಕ್ಸ್ 976, ಮುಂಬಯಿ – 1, ವಿಳಾಸಕ್ಕೆ ಕಳುಹಿಸಿರಿ.

ಉಚ್ಚ ದರ್ಜೆಯ ಈ ಚಿಹ್ನೆಯನ್ನು ನೋಡಿಕೊಳ್ಳಿರಿ



ಇದು 'ಮ್ಯಾನರ್ಸ್' ರವರ ತಯಾರಿಕೆ

GEOFFREY MANNERS & CO. PRIVATE LTD., BOMBAY · DELHI · CALCUTTA · MADRAS.

ASP/GM6

Photo by B. S. C. Sekhar



ಬಹುಮಾನ
ಪಡೆದ ಶೀರ್ಷಿಕೆ

**ಕೈಯಿಲ್ಲದಿದ್ದರೂ ಎತ್ತಿ ಕೊಂಡು ತಿನ್ನಬಲ್ಲುವು!**

ಕಳಿಸಿದವರು:
ಕೆ. ಟಿ. ಅನಂತರೆಡ್ಡಿ

